ವರುಷ ೨ ಕುಸುಮ ೮

# ಪುರಸ್ಕಾರ

(ಕಾದಂಬರಿ)

ಗಣಪತಿ ಮೊಳೆಯಾರ



ವಿವೇಕ ಸಾಹಿತ್ಯಮಾಲೆ

ಡಿ ನಂಬ್ರ 6-41, ಮಣ್ಣಗುಡ್ಡೆ

ಮಂಗಳೂರು-3

## ಎರಡು ಮಾತು.

ಮಾನವನು ಎಲ್ಲೆ ತಪ್ಪಿದ ಆಸೆಯ ಗುಲಾಮನಾದಾಗ ಇಲ್ಲದ ವ್ಯಥೆಗೀಡಾಗುವನು; ಇದ್ದ ಸುಖವೂ ಕಣ್ಮರೆಯಾಗುವುದು. ಈ ಕಾದಂಬರಿಯಲ್ಲಿ ಇಬ್ಬರು ಇದೇ ತೆರದಲ್ಲಿ ಸೋತು ಹೋಗಿ ಕೊನೆಗೆ ಪ್ರೀತಿಸಿದ ಮಂದಿಗೆ ಕೊಟ್ಟ ಪುರಸ್ಕಾರವನ್ನು ಲೇಖಕರು ಅಂದವಾಗಿ ಚಿತ್ರಿಸಿರುವರು.

ಈ ವರುಷದ ಎರಡನೇ ಕುಸುಮವಾದ ಈ ಪುಸ್ತಕ ಹೊರಬೀಳಲು ಸ್ವಲ್ಪ ವಿಳಂಬವಾಯಿತು. ಆ ಬಗ್ಗೆ ಚಂದಾದಾರರಲ್ಲಿ ಕ್ಷಮೆ ಕೇಳುವೆವು. ಕನ್ನಡಿಗರ ಉದಾರ ಬೆಂಬಲ ದೊರೆಯಲೆಂದು ಪ್ರಾರ್ಥಿಸುವೆವು.

ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ "ಸರಸ್ವತೀ ಪ್ರಿಂಟಿಂಗ್ ವರ್ಕ್ಸ್"ನ ವ್ಯವಸ್ಥಾಪಕರಿಗೆ ವಂದನೆಗಳು.

ಇತಿ ತಮ್ಮ,

**ಸಂಪಾದಕ.**

# "ಪುರಸ್ಕಾರ"

ಕತ್ತಲೆಯು ಕವಿದಿತ್ತು. ಅದರೊಡನೆ ಮಳೆಯೂ ಧಾರಾಕಾರವಾಗಿ ಸುರಿಯತೊಡಗಿತ್ತು. ಆ ಮಳೆಯ ಹೊಡೆತದ ಸುಯ್ಲು! ಜೀರುಂಡೆಗಳ ಅವಿಶ್ರಾಂತ ಮೊರೆತ! ಇವುಗಳಿಂದ ಕಿವಿ ಕಿವುಡುಗಟ್ಟಿತ್ತು. ಜನತೆಯ ಮನೋಭಾವನೆಯಲ್ಲದನ್ನು ಈಕ್ಷಿಸಿದರೆ ಪ್ರಪಂಚವೆಲ್ಲವೂ ಶೂನ್ಯದಲ್ಲಿ ಲೀನಗೊಂಡಂತೆ ತೋರುತಿತ್ತು. ಆ ಭಯಂಕರ ರಾತ್ರಿಯಲ್ಲಿ, ಕತ್ತಲೆ ದುಂಬಿದ ಕಡು ಕಾಡುದಾರಿಯಲ್ಲಿ ರಮೇಶ ತನ್ನ ಸೇವಕ ದಾಸಣ್ಣ ತೋರಿಸುತ್ತಿದ್ದ ಲಾಂದ್ರದ ಬೆಳಕಿನಲ್ಲಿ ದಾರಿಯನ್ನು ದೃಷ್ಟಿಸಿ ನೋಡುತ್ತಾ ಭರದಿಂದ ಸಾಗುತ್ತಿದ್ದನು. ಅಂತೆಯೇ ತನ್ನ ಧನಿಯ ಮನೋಭಾವವು ಶೋಕಪೂರಿತವಾಗಿರುವುದನ್ನು ಕಂಡು ದಾಸಣ್ಣನಾದರೋ ಮೌನವನ್ನು ಧರಿಸಿ ತಾನು ಹಿಡಿದಿದ್ದ ಲಾಂದ್ರದ ಬೆಳಕನ್ನು ದಾರಿಯ ಕಡೆ ತೋರಿಸು ವುದರಲ್ಲಿ ನಿರತನಾಗಿ ನಡೆಯುತ್ತಿದ್ದನು.

ರಮೇಶನು ಸಿರಿಯಲ್ಲಿ ಮುಳುಗಿ ಮೇಲಕ್ಕೆ ಬಂದಂತೆ ಕಾಣು ತ್ತಿದ್ದರೂ ಅವನ ಸಾತ್ವಿಕತೆ, ಹಾಗೂ ಆ ದೈನ್ಯತೆ ಇವುಗಳನ್ನು ಅವನ ಮುಖವು ಆ ಕಿರುಬೆಳಕಿನಲ್ಲಿ ಸ್ಪಷ್ಟಪಡಿಸುವಂತೆ ತೋರಿಬರುತ್ತಿತ್ತು. ದುಃಖದ ಆವೇಗದಲ್ಲಿ ರಮೇಶ ಮೌನವನ್ನೊಡೆದು ಕೇಳಿದ: "ಎಂತಹ ಮಳೆ! ಏನೂ ಒಳ್ಳೆಯ ಲಕ್ಷಣ ತೋರುತ್ತಿಲ್ಲ. ನಾವು ಹೋಗಿ ಮುಟ್ಟುವ ಮೊದಲೇ, ಪಾಪ! ಆ ಮುದುಕಿ ಸತ್ತಿದ್ದರೆ?"

"ಹಾಗೆ ಆಗಲಿಕ್ಕಿಲ್ಲ. ನಿಮ್ಮನ್ನು ನೋಡಿ ತಣಿಯದ ಮುದುಕಿಯ ಆತ್ಮ ಅಷ್ಟು ಬೇಗನೆ ಪರಂಧಾಮುವನ್ನೈದಲಾರದು" ಎಂದನು ದಾಸಣ್ಣ.

ರಮೇಶ ಮುಂದೆ ವಿಚಾರಿಸಲಿಲ್ಲ. ಅವನ ಮನಸ್ಸು ತನ್ನ ಬಾಲ್ಯದ ದಿನಗಳನ್ನು ಸ್ಮರಿಸಿಕೊಳ್ಳುತ್ತಿತ್ತು. ಕುಸುಮಳ್ಳಿಯ ಜಮೀನ್ದಾರರ ಏಕ ಮಾತ್ರ ಪುತ್ರನಾಗಿ ಸಿರಿಸಂಪತ್ತಿನಲ್ಲಿ ಈಗ ರಮೇಶನು ಪೇಟೆಯಲ್ಲಿದ್ದು ಓಲಾಡುತ್ತಿರುವವನಾದರೂ ಅವನ ಬಾಲ್ಯದ ಬಹುಭಾಗ ಆ ಹಳ್ಳಿ

ಯಲ್ಲಿಯೇ ಕಳೆದಿತ್ತು. ರಮೇಶ ಚಿಕ್ಕವನಾಗಿದ್ದಾಗ ಬಹು ತುಂಟ ನಾಗಿದ್ದ. ಅವನು ಮಾಡದ ತುಂಟತನವಿರಲಿಲ್ಲ. ಆಡದ ಆಟವಿರ ಲಿಲ್ಲ. ಆಗಿನ ಅವನ ಗೆಳತಿಯರಲ್ಲಿ ಒಬ್ಬಳಾದ ಸರಳಾಕುಮಾರಿಯ ತಾಯಿ ಈಗ ಬೇನೆ ಬಿದ್ದಿದ್ದಳು. ಆಕೆ ತನ್ನಾಯುಷ್ಯದ ಬಹುಭಾಗ ವನ್ನು ಆ ಹಳ್ಳಿಯ ಜಮೀನ್ದಾರರ ಮನೆಯಲ್ಲಿಯೇ ಸವೆಸಿದ್ದಳು—ಪರಿ ಚಾರಿಕೆಯಾಗಿ. ರಮೇಶನನ್ನು ಸಾಕಿ ಸಲಹಿದ ಹೆಮ್ಮೆ ಅವಳದು. ಆಕೆ ಆತನ ದಾದಿ—ಪ್ರೀತಿಯ ತಾಯಿ. ಆದುದರಿಂದಲೇ ಆಕೆ ತನ್ನ ಕೊನೆ ಗಾಲದಲ್ಲಿ ಆತನನ್ನು ಕಾಣುವ ಆಸೆಯನ್ನು ವ್ಯಕ್ತಪಡಿಸಿದ್ದಳು. ಆದುದ ರಿಂದ ರಮೇಶ ಆ ಕಾಳರಾತ್ರಿಯಲ್ಲಿಯೂ ಮುದುಕಿಯ ಗುಡಿಸಲಿಗೆ ಹೊರಟಿದ್ದನು.

ರಮೇಶ ಮಂಗಳೂರಿನಲ್ಲಿ ವಾಸಿಸುತ್ತಿದ್ದ. ಆತ ಇಂದೇ ಕುಸು ಮಳ್ಳಿಗೆ ಬಂದಿದ್ದ. ದೈವಯೋಗದಿಂದ ಮುದುಕಿಯ ಆಶೆ ಈಡೇರುವ ಕಾಲ ಬಂದಿತ್ತು.

ರಮೇಶನ ಯೋಚನೆ ಮುದುಕಿಯನ್ನು ಬಿಟ್ಟು ಆಕೆಯ ಮಗಳತ್ತ ಹರಿಯಿತು. “ಸರಳಾ! ತನ್ನ ಅಂದಿನ ಗೆಳತಿ ಸರಳಾ, ಇಂದು ಏನಾಗಿರ ಬಹುದು? ಹೇಗಿರಬಹುದು?” ಎಂದು ಆತನು ಮನದಲ್ಲೇ ಚಿಂತಿಸು ತ್ತಿದ್ದನು.

“ಸರಳಾ!” ಆ ಹೆಸರು ರಮೇಶನ ಬುದ್ಧಿಯಿಂದ ಮಾಸಲಿಲ್ಲ! ಆಕೆ ಯನ್ನು ನೆನೆದಾಗಲೆಲ್ಲಾ ಆಕೆಯ ಅಂದಿನ ಕಣ್ಣುಗಳು ಆತನೆದುರು ಬಂದು ನಿಂತಂತೆ ಭಾಸವಾಗುತ್ತಿತ್ತು. ಏಕೋ “ಆ ಕಣ್ಣುಗಳ ಮುಂದೆ ನಾನು ಅಪರಾಧಿಯಾಗಿದ್ದೇನೆ” ಎಂಬ ಯೋಚನೆ ಅವನ ಮನಸ್ಸಿನಲ್ಲಿ ಮೂಡಿಮೂಡಿ ಮಾಯವಾಗುತ್ತಿತ್ತು.

ಆಕೆಯ ವಿಷಯ ಹೆಚ್ಚು ಅರಿಯುವ ಕುತೂಹಲದಿಂದ ರಮೇಶ ಆ ದಾಸಣ್ಣನನ್ನು ಪ್ರಶ್ನಿಸಿದ: “ದಾಸಣ್ಣ, ಗುಡಿಸಲಲ್ಲಿ ಆ ಮುದುಕಿ ಒಂಟಿ ಯಾಗಿರುವಳೇ?”

ಏನೋ ಯೋಚಿಸುತ್ತಾ ಅನ್ಯಮನಸ್ಕನಾಗಿದ್ದ ದಾಸಣ್ಣ “ಹೂಂ” ಎಂದ.

ರಮೇಶನಿಗೆ ನಿರಾಶೆಯಾಯಿತು. "ಸರಳೆ ಹಾಗಾದರೆ ಅಲ್ಲಿಲ್ಲ!" ಎಂದುಕೊಂಡು "ಮುದುಕಿ ಒಬ್ಬಳೇ?" ಎಂದು ಮತ್ತೂ ಆಶ್ಚರ್ಯದಿಂದ ಕೇಳಿದನು.

ಈಗ ದಾಸಣ್ಣನ ಯೋಚನೆ ಕಡಿದಿತ್ತು. "ಅಲ್ಲ, ಆಕೆಯ ಮಗಳು ಸರಳೆಯೂ ಜೊತೆಯಲ್ಲಿದ್ದಾಳೆ." ಎಂದು ತನ್ನ ತಪ್ಪನ್ನು ತಿದ್ದಿಕೊಂಡನು.

"ಸರಳೆಯೇ? ಹಾಗಾದರೆ ಆಕೆಗೆ ವಿವಾಹವಾಗಲಿಲ್ಲವೇ?"

"ಎಲ್ಲಿನ ವಿವಾಹ ಸ್ವಾಮಿ? ಬಡವರ ಮಗಳನ್ನು ಯಾರು ತಾನೇ ಕೈ ಹಿಡಿಯಬೇಕು?"

"ಹೂಂ" ಎಂದನು ರಮೇಶ.

ಮಳೆ ಮೊದಲಿಗಿಂತಲೂ ಜೋರಾಗಿ ಬರ ತೊಡಗಿತು. ಆ ಮಳೆಯಲ್ಲಿ ನಡೆಯುತ್ತಾ ಬೇಸರದಿಂದ ರಮೇಶ ಕೇಳಿದ: "ಇನ್ನೆಷ್ಟು ದಾರಿಯಿದೆ?"

"ದಾರಿ ಮುಗಿಯಿತು. ಅಲ್ಲಿ—ಕಾಣುತ್ತಿದೆ ಗುಡಿಸಲು!" ಎಂದು ಕೈದೋರಿಸಿದನು ದಾಸಣ್ಣ. ರಮೇಶ ನೋಡಿದನು. ಎದುರಿಗೆ ಒಂದು ಮುರುಕು ಗುಡಿಸಲು. ಅದರೊಳಗಿಂದ ಕಿರಿಯ ಬೆಳಕು ತೋರುತ್ತಿತ್ತು—ಗುಡಿಸಲಿನ ಬಡತನವನ್ನು ತೋರಿಸುತ್ತಾ!

ದಾಸಣ್ಣ ಮೆಟ್ಟಲಿನ ಬಳಿಯಲ್ಲಿ ನಿಂತು ತನ್ನ ಲಾಂದ್ರವನ್ನು ಮೇಲೆತ್ತಿ ಹಿಡಿದನು. ಅದರ ಬೆಳಕಿನಿಂದ ಕೋಣೆ ಬೆಳಗಿತು. ರಮೇಶ ತನ್ನ ಹೃದಯವನ್ನು ಬಿಗಿಹಿಡಿದು ಒಳಗೆ ಪ್ರವೇಶಿಸಿದನು. ಮುರುಕು ಮಂಚವೊಂದರ ಮೇಲೆ ಹರಕು ಕಂಬಳಿ ಹಾಸಿತ್ತು. ಅದರ ಮೇಲೆ ಒಂದು ಕಂಬಳಿ ಹೊದೆದುಕೊಂಡು ಮುದುಕಿಯ ವೇದನಾಪೂರಿತ ದೇಹ ಮಲಗಿತ್ತು. ಮಂಚದ ಪಕ್ಕದಲ್ಲಿ ಹರೆಯ ಹದಿನಾರರ ರೂಪಸಿ ಕಿಶೋರಿಯೊಬ್ಬಳು ಕಂಬನಿದುಂಬಿ ಕುಳಿತಿದ್ದಳು. ಬಾಗಿಲ ಬಳಿಯಲ್ಲಿ ಹೆಜ್ಜೆಗಳ ಸಪ್ಪಳ ಕೇಳಿ ಆಕೆ ಮುಖವನ್ನು ಮೇಲೆತ್ತಿ ಸುಳಿಯಿಸಿ ನೋಡಿದಳು—ಬಂದವನು ರಮೇಶ! ಕಿಶೋರಿಯ ಮುಖ ಆ ದುಃಖದ ಸಮಯದಲ್ಲಿಯೂ ನಸು ಅರಳಿತು. ಬಳಿಕ ಅದನ್ನು ಯಥಾಪ್ರಕಾರ ಕಣ್ಣೀರು

ಆಶ್ರಯಿಸಿತು. ಮಂಚದಿಂದ ಎದ್ದು, ತಾಯಿಯ ಬಳಿಯಲ್ಲಿ ನಿಂತು, ಆಕೆಯ ಕಿವಿಯತ್ತ ತನ್ನ ಮುಖ ಬಾಗಿಸಿ ನುಡಿದಳು: "ಅಮ್ಮಾ! ರಮೇಶ ರಾಯರು ಬಂದಿದ್ದಾರೆ."

ಸಂತೋಷದಿಂದ ಒಮ್ಮೆ ಮುದುಕಿ ಕಣ್ಣರಳಿಸಿ ನೋಡಿದಳು— ಆಕೆಯ ಎದುರಿಗೆ ರಮೇಶ ನಿಂತು, "ಅಮ್ಮಾ!" ಎಂದು ಕರೆದ!

"ಬಂದೆಯಾ ಮಗೂ!" ಸಂತೋಷದಿಂದ ತುಂಬಿ ಹೋದ ಆಕೆ ತನ್ನ ಕೈಯನ್ನೆತ್ತುವ ಪ್ರಯತ್ನ ಮಾಡಿದಳು—ಆಗಲಿಲ್ಲ. ಅದನ್ನು ತಿಳಿದು ರಮೇಶನೇ ಆಕೆಯ ಬಲಗೈಯನ್ನೆತ್ತಿಕೊಂಡನು. ಆ ಸಾಕುತಾಯಿಯ ಪುತ್ರಪ್ರೇಮದೆದುರು ಆತ ಮರಳಿಯೊಮ್ಮೆ ಶಿಶುವಾಗಿದ್ದ!

ಧನಿ—ದಾಸಿಯರ ಭೇದ ಆಗ ಎಳ್ಳಷ್ಟೂ ಇರಲಿಲ್ಲ. ಮುದುಕಿ ಯಾದರೋ ತನ್ನ ಕೊನೆಗಾಲದಲ್ಲಿ ಪುತ್ರಸುಖವನ್ನು ಕಂಡುಂಡಳು. ಆಕೆಯ ನಿರ್ಜೀವವಾಗಿದ್ದ ನಾಲಗೆಗೆ ಆಗ ವಿಲಕ್ಷಣ ಚೈತನ್ಯ ಬಂದಿತ್ತು. "ಸುಖವಾಗಿರುವೆಯಾ?" ಎಂದು ಕೇಳಿದಳಾಕೆ.

"ಹೂಂ" ಎಂದು ಅರೆಮನಸ್ಸಿನಿಂದ ನುಡಿದು ರಮೇಶ ಕೇಳಿದನು: "ನಿಮ್ಮ ಆರೋಗ್ಯ ಹೇಗಿದೆಯಮ್ಮ?"

"ನನ್ನದೇನು ಮಗೂ! ನನ್ನ ಕಾಲದವಧಿ ಮುಗಿಯುತ್ತಾ ಬಂತು. ಇನ್ನು ನೀವು ಬದುಕಿ ಬಾಳಬೇಕು. ನಿಮ್ಮ ಬಾಳು ಬೆಳಗಲಿ!" ಎಂದು ತುಂಬುಹೃದಯದಿಂದ ಹರಸಿದಳು.

"ಮದ್ದು ಮಾಡಿಸಲಿಲ್ಲವೇ?"

"ಯಾರು ಮಾಡಿಸಬೇಕು? ನನ್ನ ಕೈಯಲ್ಲಿ ಕಾಸೆಲ್ಲಿದೆ? ನೀನಂತೂ ನಮ್ಮನ್ನು ಮರೆತು ಪಟ್ಟಣದಲ್ಲಿ..........." ಎಂದು ನಿಟ್ಟುಸಿರಿಟ್ಟಳು ಮುದುಕಿ. ರಮೇಶನಿಗೂ ಏನೋ ಅನ್ನಿಸಿತು. ನಿರುತ್ತರನಾದ.

"ಕಡೆಗಾದರೂ ನಮ್ಮನ್ನು ಮರೆಯದೆ ಇಲ್ಲಿಗೆ ಬಂದೆಯಲ್ಲಾ!" ಎಂದು ಹೇಳಿ ನಿಲ್ಲಿಸುವಾಗ ಮುದುಕಿ ಕೆಮ್ಮತೊಡಗಿದಳು. ತಿದಿ ಯಂತೆ ಆಕೆಯ ಎದೆ ಏರಿಳಿಯುತ್ತಿತ್ತು. ಸರಳೆ ಗಾಬರಿಯಿಂದ ಬಂದು ಮುದುಕಿಯ ಬಳಿ ನಿಂತಳು. ಮೆಲ್ಲನೆ ಆಕೆಯ ಎದೆಯ ಮೇಲೆ

ಕೈಯಿರಿಸಿ ಕೆಮ್ಮನ್ನು ತಡೆಯುವ ಪ್ರಯತ್ನ ಮಾಡತೊಡಗಿದಳು. ಆಕೆಯ ಸುಂದರಮುಖ ಚಿಂತೆಯ ನೆಲೆವೀಡಾಗಿತ್ತು.

ಕೆಮ್ಮು ನಿಂತಾಗ ಮುದುಕಿ ಸಾವನ್ನು ಗೆದ್ದುಬಂದವಳಂತೆ ಸಂತೋಷದಿಂದ ಹೇಳತೊಡಗಿದಳು: "ನೋಡು ರಮೇಶ! ಹೀಗೆ ಕೆಮ್ಮು ಬರತೊಡಗಿದರೆ ಕಾಲುಗಂಟೆ ನಿಲ್ಲುವುದೇ ಇಲ್ಲ. ಈಗ ನಿಂತಿತಲ್ಲ! ನನ್ನ ಕಡೆಯ ಮಾತುಹೇಳದೆ ಎಲ್ಲಿ ನಾಲಗೆ ಬೀಳುವುದೋಎಂದು ಹೆದರಿದ್ದೆ......."

"ಕಡೆಯ ಮಾತು!" ಎಂದು ಉದ್ಗರಿಸಿದನು ರಮೇಶ.

"ಗಾಬರಿಯಾಗಬೇಡ—ಇದು ನನ್ನ ಕಡೆಯ ಮಾತು! ನಾನಿನ್ನು ಬದುಕುವಂತಿಲ್ಲ. ಆ ಇಚ್ಛೆಯೂ ನನಗಿಲ್ಲ. ನಾನಿನ್ನು ಬದುಕಬೇಕಾಗಿದ್ದರೆ ಅದು ಈಕೆಗಾಗಿ. ಆದರೆ ಈಗ ನೀನು ಬಂದೆ. ನನ್ನ ಆತ್ಮಕ್ಕೆ ಎಷ್ಟೋ ಶಾಂತಿಯಾಯಿತು. ಈಕೆಯನ್ನು ನಿನ್ನ ಕೈಯ್ಯಲ್ಲಿಡುವೆ. ಇನ್ನು ಈಕೆಯ ಒಡೆಯ ನೀನು" ಎಂದು ಆಕೆಯ ಕೈಯ್ಯನ್ನೆತ್ತಿ ರಮೇಶನ ಕೈಯಲ್ಲಿಟ್ಟಳು.

ರಮೇಶ ಸ್ತಂಭಿತನಾದ. ಅವನ ನಡುಗುವ ಹಸ್ತದಲ್ಲಿ ಇನ್ನೊಂದು ಕುಸುಮ ಕೋಮಲವಾದ ಅವಳ ಹಸ್ತವು ನಡುಗುತ್ತಿದೆ.

"ತಾಯೀ......."ಕಾತುರದಿಂದ ಕೂಗಿದನು ರಮೇಶ. ಅವನ ಮುಖ ಗಾಬರಿಗೊಂಡಿತ್ತು. ಒಮ್ಮೆ ಸರಳೆಯತ್ತ ಇನ್ನೊಮ್ಮೆ ಮುದುಕಿಯತ್ತ ದಿಟ್ಟಿಸಿ ನೋಡತೊಡಗಿದನು.

"ತಾಯೀ......." ಸರಳೆಯ ಮಿಂಚಿನ ಕಣ್ಣೋಟ ಅವನ ಮಾತನ್ನು ತಡೆಯಿತು. ಅವನ ಅಧೀರವಾದ ಆ ಪರಿಸ್ಥಿತಿಯಲ್ಲಿಯೂ ಆ ನೋಟವು ಕಾವೆದ್ದ ಮೈಗೆ ಚಂದನ ಸವರಿದಂತೆ ಹಿತವೆನಿಸಿತು.

ಮುದುಕಿ ಇನ್ನೊಮ್ಮೆ ಕೆಮ್ಮತೊಡಗಿದಳು. ರಮೇಶ ಆಕೆಯನ್ನೆತ್ತಿ ಕುಳಿತುಕೊಳ್ಳಿಸಲು ಯತ್ನಿಸಿದನು. ಮುದುಕಿಯ ಕುತ್ತಿಗೆಯಡಿಗೆ ಕೈಯಿಕ್ಕಿದನು. ಅಲ್ಲಿ ಆತನು ಸ್ಪರ್ಶಿಸಿದುದೇನನ್ನು? ಸರಳೆಯ ಕೋಮಲಕರವನ್ನು! ಆಕೆಯೂ ಮುದುಕಿಯನ್ನೆತ್ತುವ ಪ್ರಯತ್ನದಲ್ಲಿಯೇ ಇದ್ದಳು.

ಇಬ್ಬರ ಮೈಗಳೂ ರೋಮಾಂಚಿತವಾದುವು! ಮುದುಕಿಯೊಮ್ಮೆ ತೃಪ್ತಿಯಿಂದ ಇಬ್ಬರ ಮುಖಗಳನ್ನು ನೋಡಿ ಕಣ್ಮುಚ್ಚಿದಳು. ಆಕೆ ಆ ಬಳಲಿದ ಕಣ್ಣುಗಳನ್ನು ಅನಂತರ ತೆರೆಯಲಿಲ್ಲ.

"ಅಮ್ಮಾ!......." ಎಂದು ಸರಳೆ ದುಃಖದಿಂದ ತಾಯಿಯ ಮೈಮೇಲೆ ಬಿದ್ದು ಹಲುಬಿದಳು.

ಧೀರನಂತೆ ಕುಳಿತ ರಮೇಶನಿಗೂ ತಾನು ಅಧೀರನಾಗುತ್ತಿದ್ದಂತೆ ಗೋಚರವಾಯಿತು. "ದಾಸಣ್ಣಾ" ಎಂದು ಚೀರಿದನು........

ಒಂದು ಜೀವಹೋದುದು ತನಗೇನೂ ದೊಡ್ಡದಲ್ಲವೆಂಬಂತೆ ಗಾಳಿ ಮಳೆ ಎಡೆಬಿಡದೆ ಸುರಿಯುತ್ತಿತ್ತು. ಪ್ರಕೃತಿದೇವಿ ರೌದ್ರರೂಪ ತಾಳಿದ್ದಳು!

ತಾಯಿಯ ಶವದ ಮೇಲೆ ಬಿದ್ದ ಆ ಕಿಶೋರಿ ಪ್ರಜ್ಞಾವಿಹೀನಳಾಗಿದ್ದಳು! ಸರಳಕುಮಾರಿಯ ಆ ಕರುಣಾಜನಕಸ್ಥಿತಿಗೆ ಮರುಗುವಂತೆ ಪ್ರಕೃತಿರಾಣಿ ನಿರಂತರ ವರ್ಷಾಶ್ರುಧಾರೆ ಸುರಿಸುತ್ತಲೇ ಇದ್ದಳು.

ತಾಯಿಯ ಮೃತದೇಹದ ಮೇಲೆ ಪ್ರಜ್ಞಾವಿಹೀನಳಾಗಿ ಆಕೆ ಇನ್ನೂ ಮಲಗಿಯೇ ಇದ್ದಳು. ಗಡಿಬಿಡಿಯಿಂದ ಮೇಲೆದ್ದು ರಮೇಶ ಸರಳೆಯ ಬಳಿ ಕುಳಿತು ಆಕೆಯ ಹಣೆಗೆ ತಣ್ಣೀರು ತಟ್ಟತೊಡಗಿದನು. ತುಸು ಹೊತ್ತಿನಲ್ಲಿ ಸರಳೆ ಕಣ್ತೆರೆದು "ಅಮ್ಮಾ!" ಎಂದು ಕೂಗಿಕೊಂಡಳು.

"ಸರಳಾ!" ರಮೇಶ ಮೆಲ್ಲನೆ ಕರೆದನು. ಸರಳೆ ಆತನ ಮುಖವನ್ನೊಮ್ಮೆ ದೃಷ್ಟಿಸಿ ಅನಂತರ ತಲೆತಗ್ಗಿಸಿದಳು.

"ಸರಳಾ!" ಹಿಂದಿನಿಂದ ಬಿಗಿದ ಕಂಠವೊಂದು ಕರೆಯಿತು. ಸರಳೆ ಮೊದಲಿನಂತೆಯೇ ಅತ್ತ ನೋಡಿದಳು. "ಭಾವ!" ಎಂದು ಆಕೆಯ ಬಾಯಿಯಿಂದ ನುಡಿಹೊರಟಂತೆ ಕಣ್ಣುಗಳಿಂದ ಅಶ್ರುಬಿಂದುಗಳೂ ಉರುಳಿದುವು.

ರಮೇಶ ಅಚ್ಚರಿಯಿಂದ ಬಾಗಿಲ ಕಡೆ ನೋಡಿದನು. ಗಂಭೀರ ಮುಖದ ತರುಣನೊಬ್ಬನು ಬಾಗಿಲ ಬಳಿಯಲ್ಲಿ ನಿಂತು ಕೇಳುತ್ತಿದ್ದನು. "ಅತ್ತೆಗೇನಾಯಿತು?"

"ತಾಯಿ!" ಎನ್ನುತ್ತಾ ಸರಳೆ ತಾಯಿಯ ದೇಹವನ್ನಪ್ಪಿಕೊಂಡಳು.

ಆ ಯುವಕ ಸುಧಾಕರನಿಗೆ ಎಲ್ಲವೂ ತಿಳಿಯಿತು. ಅವನ ಕಣ್ಣುಗಳು ಮಡಿದ ಅತ್ತೆಗೆ ಬಾಷ್ಪಾಂಜಲಿ ಸಮರ್ಪಿಸುತ್ತಿದ್ದುವು.

ಎರಡು ನಿಮಿಷ ಮೌನ. ಸರಳೆಯ ಅಳುವಿನ ಬಿಕ್ಕಳಿಕೆಗಳು ಮತ್ತು ಹೊರಗಿನ ಮಳೆಗಾಳಿಗಳ ಸದ್ದು ಕೇಳುತ್ತಲೇ ಇತ್ತು.

ಸುಧಾಕರ ಧೈರ್ಯಶಾಲಿ. ಉಕ್ಕಿ ಬರುವ ದುಃಖವನ್ನು ತಡೆದು ಕೊಂಡನು. ಗುಡಿಸಲಿನ ಮೂಲೆಯನ್ನು ಆ ಮಂದ ಬೆಳಕಿನಲ್ಲಿ ಹುಡುಕಿದನು. ದೈವವಶದಿಂದ ಅಲ್ಲಿ ಒಂದು ತೆಂಗಿನಕಾಯಿ ಇತ್ತು. ಅದನ್ನು ಒಡೆದು ಅದರಲ್ಲಿ ದೀಪಹಚ್ಚಿ ಅತ್ತೆಯ ತಲೆಯ ಬಳಿ ಇಟ್ಟನು. ಶವಕ್ಕೆ ಹೊದೆಸಲು ಬಟ್ಟೆ ಸಿಗಲಿಲ್ಲ. ಅವನೊಡನೆಯೂ ಇರಲಿಲ್ಲ. ಮೆಲ್ಲನೆ ಕುಗ್ಗಿದ ದನಿಯಿಂದ "ಸರಳಾ!" ಎಂದು ಕರೆದನು. ಸರಳೆ ಆತನ ಮಿದು ಮಾತು ಕೇಳಿ ತನ್ನ ಅಶ್ರುಸಿಕ್ತ ನೇತ್ರಗಳನ್ನು ಅವನತ್ತ ಹೊರಳಿಸಿದಳು— "ಏನು?" ಎಂದು ಕೇಳುವಂತೆ.

"ಬಟ್ಟೆ ಇದೆಯೇ?—ಅತ್ತೆಗೆ ಹೊದೆಸಲು." ಎಂದು ಕೇಳಿದನು. ಸರಳಾ ಅರೆಕ್ಷಣ ಅನುಮಾನಿಸಿದಳು. ಆಕೆಯೊಡನೆ ಹೊಸಬಟ್ಟೆ ಇರಲಿಲ್ಲ. ಬಡ ಗುಡಿಸಲಿನಲ್ಲಿ ಏನಿದ್ದೀತು?

ರಮೇಶ ಎಲ್ಲವನ್ನೂ ನೋಡುತ್ತಿದ್ದನು. ತಾನು ಉಡಲೆಂದು ತಂದ ತನ್ನ ಹೊಸ ದೋತರವನ್ನು ತೆಗೆದು ಅದರಿಂದ ಮುದುಕಿಯ ದೇಹವನ್ನು ಮುಚ್ಚಿದನು.

೨

ಮುದುಕಿಯ ದೇಹವನ್ನು ಚಿತೆಯ ಮೇಲೇರಿಸಿ, ದುಃಖದಿಂದ ಬೆಂಕಿಯುರಿಸಿ ಕಣ್ಣೀರ ತರ್ಪಣ ಬಿಟ್ಟುದಾಯಿತು. ಬೆಂಕಿಯುರಿದು ಚಿತೆಯನ್ನಾವರಿಸಿದಾಗ ದುಃಖ ತಡೆಯಲಾರದೆ, ಸರಳಾ, ರಮೇಶ, ಮತ್ತು ಸುಧಾಕರ ತಲೆತಗ್ಗಿಸಿಕೊಂಡು ಮನೆಗೆ ಹಿಂದಿರುಗಿ ಎರಡು ದಿನಗಳು ಕಳೆದಿದ್ದುವು.

ಸರಳೆಯ ದುಃಖ ಅನ್ಯಾದೃಶವಾಗಿತ್ತು. ಆಕೆಯ ದುಃಖ ಸ್ವಲ್ಪವಾದರೂ ತಣಿಯಲಿ ಎಂದು ರಮೇಶ ಆಕೆಯ ಮುಂದಿನ ನೆಲೆಯ ಕುರಿತು ಚರ್ಚಿಸಿರಲಿಲ್ಲ. ವಿಧಿಯಿಲ್ಲದೆ ಆತನು ಅಲ್ಲಿರಬೇಕಾಯಿತು. ಸರಳೆ ಇನ್ನು ಒಬ್ಬಂಟಿಗಳು. ಯುವತಿಯಾದ ಆಕೆಯೊಬ್ಬಳೇ ಇನ್ನು ಆ

ಮುರುಕು ಗುಡಿಸಲಿನಲ್ಲಿ ಇರುವುದಂತೂ ಅಸಾಧ್ಯವಾಗಿತ್ತು. ರಮೇಶ ನಂತೂ ತನ್ನ ಮನದಲ್ಲಿ ಕರ್ತವ್ಯವನ್ನು ನಿಶ್ಚಯಿಸಿ ಬಿಟ್ಟಿದ್ದ. ಆಕೆಯ ತಾಯಿ ಸಾಯುವ ಕಾಲದಲ್ಲಿ ಆಕೆಯನ್ನು ಆತನ ವಶ ಒಪ್ಪಿಸಿ "ಇನ್ನು ಈಕೆಯ ಒಡೆಯ ನೀನು" ಎಂದಿದ್ದಾಳೆ.

ಸರಳೆ ಈಗ ತಬ್ಬಲಿ. ಆಕೆಯ ಅವಲಂಬನಕ್ಕೆ ಅಕಸ್ಮಾತ್ ರಮೇಶ ಒದಗಿ ಬಂದಿದ್ದ. ಆದರೆ, ಅವರ ದಾರಿಯಲ್ಲಿ ಈಗ ಸುಧಾಕರ ಬಂದು ನಿಂತಿದ್ದ. ಆತ ಬಂದುದರಿಂದ ಸರಳೆಯ ಹಾಗೂ ರಮೇಶನ-ಇಬ್ಬರ ಈ ಮನಸ್ಸು ಎರಡು ಕವಲು ಬಿಟ್ಟಿದ್ದಿತು.

ಸುಧಾಕರ ಆಕೆಯ ಭಾವ—ಎಂದರೆ, ಆಕೆಯ ತಂದೆಯ ಅಕ್ಕನ ಮಗ-ಬಹಳ ಹತ್ತಿರದ ಬಂಧು. ಆತ ಬಡವನಾದರೂ ಸರಳೆಯ ಮೇಲೆ ಜನ್ಮಲಬ್ಧ ಬಂಧುತ್ವದ ಅಧಿಕಾರ ಇದ್ದೇ ಇದೆ.

ರಮೇಶ ಸರಳೆಗೆ ಜನ್ಮತಃ ಬಂಧುವಲ್ಲ. ಆದರೆ ಅವರಿಬ್ಬರ ಹೃದಯಗಳೂ ಪರಿಚಿತವಾದುವು. ಅಲ್ಲದೆ, ಆಕೆಯ ತಾಯಿ ಅವಳನ್ನು ಆತನಿಗೊಪ್ಪಿಸಿದ್ದಳು.

ಸುಧಾಕರ ಬಡವ; ರಮೇಶ ಆಗರ್ಭ ಶ್ರೀಮಂತ!

ಯಾರ ಬಳಿ ಸರಳೆಯಿನ್ನು ಕಾಲ ಕಳೆಯಬೇಕು? ಸುಧಾಕರನ ಬಾಂಧವ್ಯದ ಉಡಿಯಲ್ಲಿಯೋ ಅಥವಾ ರಮೇಶನ ಕೃಪಾಛತ್ರದ ಅಡಿಯಲ್ಲಿಯೋ? ಅಲ್ಲ........ಅದಕ್ಕಿಂತಲೂ ಹೆಚ್ಚಾದ—ಮಹತ್ವದ ಸ್ಥಾನ ರಮೇಶನೆದೆಯಲ್ಲಿ ಆಕೆಗಾಗಿ ಕಾದಿದೆಯೋ?

ಸರಳೆಯ ದುಃಖವಿದಗ್ಧ ಹೃದಯ ಆವುದನ್ನೂ ನಿರ್ಧರಿಸಲಾರದಾಗಿತ್ತು!

ಮೂರರಂದು ಮಧ್ಯಾಹ್ನ ರಮೇಶ ಸರಳೆಯೊಡನೆ ಹೇಳಿದ: "ಸರಳಾ ಇನ್ನು ನಾವು ಈ ಗುಡಿಸಲಿನಲ್ಲಿ ಇರುವುದು ಸಮಂಜಸವಾಗಿಲ್ಲ. ಇಂದು ಸಾಯಂಕಾಲವೇ ಮನೆಗೆ ಹೊರಡಬೇಕಾಗಿದೆ. ಆಗದೇ?"

ಸರಳೆ ಮಾತಾಡಲಿಲ್ಲ. ಆಕೆ ಮಾತಾಡಬೇಕಾಗಿಯೂ ಇರಲಿಲ್ಲ.

"ತಾಯಿಯ ಉತ್ತರ ಕ್ರಿಯೆಗಳಂತೂ ಈ ಗುಡಿಸಲಿನಲ್ಲಿ ತೀರಿಸಲು ಆಗುವಂತಿಲ್ಲ. ಆದುದರಿಂದ ಇನ್ನು ಇಲ್ಲಿ ನಿಲ್ಲುವುದರಲ್ಲಿ ಅರ್ಥ

ವಿಲ್ಲ........" ಎಂದು ರಮೇಶ ತನ್ನ ಮಾತನ್ನು ಮುಂದುವರಿಸಿದ. ಸಿರಿವಂತನಾದ ಅವನಿಗೆ ಆ ಬಡ ಗುಡಿಸಲಿನಲ್ಲಿ ವಾಸಿಸುವುದು ನರಕವಾಸವೇ ಆಗಿತ್ತು. ಹೇಗೋ ಈ ಎರಡು ದಿನಗಳನ್ನು ಅಲ್ಲಿ ಕಳೆದಿದ್ದ ರಮೇಶ!

"ಹಾಗಾದರೆ ನಿಮ್ಮ ಮನೆಯಲ್ಲಿಯೇ ಆಗುವುದೇ? ಜಮೀನ್ದಾರರ ಮನೆಯಲ್ಲವೇ?" ಎಂದು ಕೇಳಿದನು ಅಲ್ಲಿಯೇ ಕುಳಿತಿದ್ದ ಸುಧಾಕರ.

"ಹೌದು ಸರಳೆಯ ತಾಯಿ ನನಗೂ ತಾಯಿಯೇ! ಆಕೆಯೇ ನನ್ನನ್ನು ಪ್ರೀತಿಯಿಂದ ಸಾಕಿದವಳು. ಏನು ತಾನೆ ತೊಂದರೆ?" ಫಕ್ಕನೇ ರಮೇಶ ಉತ್ತರವಿತ್ತನು.

ಸುಧಾಕರನ ಎದೆಯೇಕೋ ಒಮ್ಮೆಗೆ ಕುಸಿದಂತಾಯಿತು—ಅವನಾಸೆಯ ಅಸ್ತಿಭಾರ ಅಲುಗಾಡಿತು. ಆದರೂ ಕೊನೆಯ ಪ್ರಯತ್ನವೆಂದು ಹೇಳಿದನು. "ಸರಳಾ ಬಡವರಲ್ಲಿ ಹುಟ್ಟಿ ಬೆಳೆದವಳು. ಸಿರಿವಂತರ ನಡೆನುಡಿಗೆ ಹೊಂದಿಸಿಕೊಳ್ಳುವುದಿನ್ನು ಆಕೆಗೆ ಶಿಕ್ಷೆ ಕೊಟ್ಟಂತೆ. ಆದರೆ, ಆ ಶಿಕ್ಷೆಯ ಅಗತ್ಯವೇನು?"

ರಮೇಶನ ಹುಬ್ಬುಗಳು ಸಂಕುಚಿಸಿದುವು. ನೋಟ ಸೂಜಿಯಂತಾಯಿತು. ಅವನು ಹೇಳಿದ: "ಸಿರಿಯೆಂದರೆ ಸುಖ. ಸುಖಪಡುವ ಅನುಕೂಲತೆ ಕಲ್ಪಿಸುವುದು ಶಿಕ್ಷೆಯಾದರೆ........"

"ಅದೇ ತಪ್ಪು—ಸಿರಿಯೆಂದರೆ ಸುಖವೆಂಬ ಕಲ್ಪನೆ ಸರ್ವಾದರಣೀಯವಲ್ಲ. ಸಿರಿತನದಲ್ಲಿಯೂ ಕಷ್ಟಗಳಿದ್ದೇ ಇರುತ್ತವೆ."

ರಮೇಶನ ಮುಖಕ್ಕೆ ಹೊಡೆದಂತಾಯಿತು. ಕ್ರುದ್ಧನಾಗಿ ಹೇಳಿದ: "ಬಗೆದಂತೆ ಬಾಳು. ಹೊಟ್ಟೆಗಿಲ್ಲದೆ ನರಳಿ ನರಳಿ ಸಾಯುವ ಬಡತನಕ್ಕಿಂತ ಸಿರಿವಂತಿಕೆ ಕೀಳೇ? ಯಾರೂ ಯಾರನ್ನೂ ಬೇಕೆಂದು ದುಃಖಕ್ಕೆ ತಳ್ಳಲಾರರು—ಅಂತೆಯೇ ನಾನೂ........ಸರಳೆ ಸುಖಿಯಾಗಿರಬೇಕೆಂದೇ ನನ್ನ ಮನದಿಚ್ಛೆ."

"ಕ್ಷಮಿಸಿರಿ. ಆಕೆಯ ಮನಸ್ಸನ್ನರಿಯದೆ ಯಾವುದೋ ಅಧಿಕಾರದ ಮೂಲಕ ಬಲವಂತಪಡಿಸುವುದು ಸರಿಯಾಗಲಾರದು." -ಸುಧಾಕರನು ಕ್ರಮೇಣ ತನ್ನ ಸಹನೆಯನ್ನು ಕಳೆದುಕೊಳ್ಳುತ್ತಿದ್ದ.

"ಯಾವುದೋ ಅಧಿಕಾರವೆಂದರೇನು? ಸರಳೆಯ ತಾಯಿ....ಸಾಯು ವಾಗ ಆಕೆಯನ್ನು ನನ್ನ ಕೈಯಲ್ಲಿಟ್ಟು ಹೋಗಿದ್ದಾಳೆ."

"ಯಾಕಿರಬಾರದು?"

"ತಾಯಿ ಮಗಳಿಗೆಂದಾದರೂ ಅಮಂಗಳವನ್ನು ಬಯಸುವಳೇ?"

"ಛೇ!"

"ಮತ್ತಿನ್ನೇನು ನಿಮ್ಮ ಮಾತಿನ ಅರ್ಥ?"

ಸುಧಾಕರ ಈಗ ಸ್ವಲ್ಪ ಪೇಚಾಡಿದ. ಸ್ವಲ್ಪ ಹೊತ್ತು ಕಳೆದು ಹೇಳಿದ: "ನಾನು ಆಕೆಯ ಸೋದರ ಭಾವ........ಆಕೆಯ ತಾಯಿ ನನಗೆ ಸೋದರತ್ತೆಯಾಗಬೇಕು. ನನಗಿಂತ ಹತ್ತಿರದ ಬಂಧು ಈಗ ಇನ್ನಾರೂ ಆಕೆಗಿಲ್ಲ. ಆದುದರಿಂದ ಇಷ್ಟು ಹೇಳುತ್ತೇನೆ."

ರಮೇಶ ಸ್ವಲ್ಪ ಹೊತ್ತು ಯೋಚಿಸಿ "ಸರಿ." ಎಂದನು. ಅವನ ಮನಸ್ಸು ಏನೋ ಅರ್ಥ ಮಾಡಿಕೊಂಡಿತು.

"ಬಡವಳಾದ ನನ್ನತ್ತೆಯ ಉತ್ತರಕ್ರಿಯೆಯನ್ನು ಬಡವರಿಗೆ ತಕ್ಕಂತೆ ನೆರವೇರಿಸಲು ಕಡು ಬಡವನಾದರೂ ನಾನು ಶಕ್ತನಾಗಿದ್ದೇನೆ."

ಸಹಸಾ ರಮೇಶ ಚಕಿತನಾಗಿ ಪ್ರಶ್ನಿಸಿದ: "ಇಷ್ಟರ ತನಕ ಇದೇ ಊರಿನಲ್ಲಿಯೇ ನೀವು ಇದ್ದಿರಾ?"

"ಹೂಂ."

"ಹಾಗಾದರೆ ಅವಳ ಕಾಯಿಲೆಯ ವೇಳೆ ಏಕೆ ಈ ಕಡೆ ಮುಖ ಹಾಕಿಲ್ಲ? ಉತ್ತರಕ್ರಿಯೆ ಮಾಡಿಸಲು ಶಕ್ತರಾದವರು ಆಕೆಗೆ ಒಂದಿಷ್ಟು ಮದ್ದು ಕೊಟ್ಟು ಆಕೆಯನ್ನು ಬದುಕಿಸುವ ಪ್ರಯತ್ನ ಮಾಡಬಾರ ದಾಗಿತ್ತೇ?"

ನಾಚಿಕೆಯಿಂದ ತಲೆತಗ್ಗಿಸಿ ಸುಧಾಕರ ನುಡಿದ: "ನನಗೆ ಅತ್ತೆಮ್ಮನ ಕಾಯಿಲೆಯ ಸುದ್ದಿಯೇ ತಿಳಿದಿರಲಿಲ್ಲ."

"ತಿಳಿಯಲೇ ಇಲ್ಲವೇ?"

"ಹೂಂ."

"ಇರಲಾರದು. ಸತ್ಯವನ್ನು ಬಚ್ಚಿಡುತ್ತೀರಾ? ಜೀವಂತರಾಗಿದ್ದಾಗ ನಿಮಗೂ ಅವರಿಗೂ ಸರಿಯಿರಲಿಲ್ಲವೆಂದು ಕೇಳಿದೆ, ನಿಜವೇ?"

ಕುತೂಹಲದಿಂದ ಆತನ ಮುಖವನ್ನು ನಿರೀಕ್ಷಿಸುತ್ತಿದ್ದ ರಮೇಶ. ಆದರೆ ಸುಧಾಕರನ ಮುಖ ಆತನ ದೃಷ್ಟಿಗೆ ಮರೆಯಾಯಿತು—ನಾಚಿಕೆಯಿಂದ ಆನತವಾಯಿತು. ಆತನಿಗಿನ್ನು ರಮೇಶನೊಡನೆ ವಾದವಿರಲಿಲ್ಲ.

ರಮೇಶ—ಸುಧಾಕರ ಇಬ್ಬರೂ ಸರಳೆಯನ್ನು ತಮ್ಮ ಬಳಿಯಿರಿಸಿಕೊಳ್ಳಲು ಇಚ್ಛಿಸಿದ್ದರು. ಅದಕ್ಕಾಗಿಯೇ ಈ ವಿವಾದ ನಡೆಯಿತು. ರಮೇಶ ತನ್ನ ಮಾತಿನಲ್ಲಿ, ತಿಳಿಯದೇ ಸುಧಾಕರನ ಏನೋ ನಿಗೂಢ ರಹಸ್ಯದ ಮೇಲೆ ಕಾಲಿಟ್ಟು ಒತ್ತಿದ್ದ. ಆ ನೋವು ಸುಧಾಕರನ ಮುಖದಲ್ಲಿ ತುಂಬಿ ಮೂಡಿತ್ತು.

ರಮೇಶ ಯೋಚಿಸಿದ—"ಸುಧಾಕರನ ಇಚ್ಛೆಯೇನೂ ಸಲ್ಲದುದಲ್ಲ. ಅದಕ್ಕೆ ತಾನೇಕಿಷ್ಟು ಈರ್ಷ್ಯೆ ಪಡಲಿ?"

ಆತನಿಗೆ ಉತ್ತರ ಸಿಗಲಿಲ್ಲ. ಸುಧಾಕರನ ಸಂವೇದನಾಪೀಡಿತವಾದ ಮುಖ ಆತನ ಕಣ್ಣೆದುರು ಕಟ್ಟಿತ್ತು. ಕೋಮಲ ದನಿಯಿಂದ ಸುಧಾಕರನನ್ನು ಸಾಂತ್ವನಗೊಳಿಸುವಂತೆ ಹೇಳಿದನು ರಮೇಶ—"ಚಿಂತಿಸಬೇಡ ತಮ್ಮಾ! ಸಿಟ್ಟಾಗದಿರು. ಸರಳೆಯ ಸುಖಕ್ಕಾಗಿ ಆಕೆಯ ಇಚ್ಛೆಯನ್ನು ವಿಚಾರಿಸಿಯೇ ಮುಂದುವರಿಯೋಣವಂತೆ. ಒಬ್ಬಳ ಭಾರ ಹೊರುವುದೇನೂ ಸುಲಭದ ಕೆಲಸವಲ್ಲ. ನನಗೊಬ್ಬನಿಗೇಕೆ ಆ ಹೊರೆ?—ಅದೂ ಇತರರ ವೈರ ಕಟ್ಟಿಕೊಂಡು! ಸರಳೆಯನ್ನು ವಿಚಾರಿಸು. ಆಕೆಯ ಅಭಿಪ್ರಾಯಕ್ಕೆ ನನ್ನ ಸಮ್ಮತಿ!"

ಎಂತಹ ದಯೆ! ಇದಂತೂ ಸುಧಾಕರನ ಸಂಪೂರ್ಣ ಸೋಲು!

ಸರಳೆ ತುಟಿ ತೆರೆಯದೆ ಆ ಎರಡು ತರುಣ ಹೃದಯಗಳ ಹೊಡೆದಾಟವನ್ನು ಈಕ್ಷಿಸಿ ನಿಟ್ಟುಸಿರಿಟ್ಟಳು. ಆಕೆಗಾಗಿ ಎಷ್ಟೊಂದು ಕೃಪೆ!

೩

ಗುಡಿಸಲಿನಲ್ಲಿ ಒಳಗೆ—ಸುಧಾಕರ ಗೋಡೆಗೊರಗಿ ಮೌನವಾಗಿ ಮಾಡನ್ನು ನೋಡುತ್ತಾ ಕುಳಿತಿದ್ದ; ಸರಳೆ ಒಂದು ಮೂಲೆಯಲ್ಲಿ ಚಿಂತೆಯಿಂದ ಬೆಂದು ಮುದುಡಿ ಕುಳಿತಿದ್ದಳು. ರಮೇಶ ಹೊರಗೆ ತೆರಳಿದ್ದ.

ಸುಧಾಕರನ ಹೃದಯು ಸಾಗರದಂತೆ ಅಲ್ಲೋಲಕಲ್ಲೋಲವಾಗಿತ್ತು. ಸಿಸಿದುದು ನೆರವೇರದ ಚಿಂತೆಯಿಂದ ಬಾಡಿದ್ದ ಆತ.

ಸುಧಾಕರನ ತಂದೆಗೆ ಒಬ್ಬಳೇ ಮಗಳು, ಸರಳೆಯು ತಾಯಿ. ಆಕೆಯ ಪತಿ ಸತ್ತು ಅನಾಥೆಯಾದಾಗ ಹೊಟ್ಟೆಯ ಪಾಡಿಗಾಗಿ ಆಕೆ ಜಮೀನ್ದಾರರಲ್ಲಿ ದಾದಿಯ ಕೆಲಸಕ್ಕೆ ಸೇರಿದಳು. ಆಗತಾನೇ ಜಮೀನ್ದಾರ್ ಸುರೇಂದ್ರರ ಪತ್ನಿ ತೀರಿಕೊಂಡು, ಅವರ ಮಗ ರಮೇಶ ತಬ್ಬಲಿಯಾಗಿದ್ದ. ತಬ್ಬಲಿ ಮಗುವನ್ನು ಸಾಕುವ ಹೊಣೆ ಸರಳೆಯ ತಾಯಿಯ ದಾಯಿತು. ಅನಂತರ ಕೆಲವು ತಿಂಗಳುಗಳಲ್ಲಿ ಸರಳೆ ಹುಟ್ಟಿದಳು. ಸರಳೆಯ ತಾಯಿಯನ್ನು ಇಷ್ಟು ಹೊತ್ತಿಗೆ ಅವಳ ತಂದೆ, ಅಣ್ಣತಮ್ಮಂದಿರು ಬಹಿಷ್ಕರಿಸಿದ್ದರು. ಆದುದರಿಂದ ಆಕೆಯ ತಮ್ಮನಾದ ಸುಧಾಕರನಿಗೆ ಆಕೆಯ ಅಂತ್ಯಕಾಲದಲ್ಲಿ ಬಂದು ಉಪಚಾರ ಮಾಡಲಾಗಲಿಲ್ಲ. ಆ ಒಂದು ತಪ್ಪಿನಿಂದಲೇ ರಮೇಶನ ದೃಷ್ಟಿಯಲ್ಲಿ ಆತ ಕೀಳಾಗಿದ್ದ.

ಸುಧಾಕರನ ಹೃದಯದಲ್ಲಿ ಈ ಮೊದಲೇ ಹೋರಾಟ ನಡೆದಿತ್ತು. ತನ್ನ ಮನೆಯವರು ಬಹಿಷ್ಕರಿಸಿದ್ದ ಸರಳೆ ಮತ್ತು ಆಕೆಯ ತಾಯಿಯ ಮನೆಗೆ ತಾನು ಹೋಗಲೇ ಅಥವಾ ಬೇಡವೇ ಎಂದು. ಆದರೂ ಆ ಎಲ್ಲಾ ಭಯ,— ಕಡೆಗೆ ಸಮಾಜದಿಂದ ಸಿಗುವ ಬಹಿಷ್ಕಾರದ ಭಯವನ್ನೂ ಮೀರಿ, ಸುಧಾಕರ ಆ ವೇಳೆಯಲ್ಲಿ ಬಂದು ಆ ಗುಡಿಸಲನ್ನು ಸೇರಿದ್ದ. ರಮೇಶನಿಂದ ಅಪಮಾನಿತನಾದರೂ ಅದನ್ನು ಮನಸ್ಸಿಗೆ ಹಚ್ಚಿಕೊಳ್ಳದೆ, ಇನ್ನೂ ಅವನು ಆ ಗುಡಿಸಲಿನಲ್ಲಿ ಸರಳೆಯ ನಿರ್ಧಾರವನ್ನು ತಿಳಿಯಲು ಕಾಯುತ್ತ ಕುಳಿತಿದ್ದ!

ಸರಳೆಯ ಹೃದಯ ಸಂಭ್ರಮಗೊಂಡಿತ್ತು. ತಾಯಿಯ ಮರಣದಿಂದ ದಾರಿಮೋರದಂತೆ ದುಃಖದಿಂದ ಬಳಲಿದ್ದ ಆಕೆಯ ಮನಸ್ಸಿನಲ್ಲಿ ಇನ್ನೆರಡು ಪ್ರಶ್ನೆಗಳು, ಸ್ವತಂತ್ರಳಾಗಿದ್ದ ಆಕೆ ಪರಾಧೀನಳಾಗುವ ಮೊದಲೇ ಉತ್ತರ ಕೊಡಬೇಕಿತ್ತು. ಅವುಗಳಲ್ಲಿ ಒಂದು ಆಕೆಯ ನೆಲೆಯ ವಿಚಾರ. ಸಾದರಪೋಷಣೆ ಆಕೆಗೆ ಎಲ್ಲಿ ಸಿಗಬಹುದು? ಬಡತನದ ಕಷ್ಟವಾದರೂ ದೊಡ್ಡದಾಗಿರಲಿಲ್ಲ ಆಕೆಗೆ— ಅದು ಅವಳಿಗೆ ಚಿರಪರಿಚಿತ–ಆಕೆಗೆ ಬೇಕಾಗಿದ್ದುದು ಮನೆಯವರ ಸ್ವಾಗತ— ಎಂದೆಂದೂ ಕುಂದದ ಸ್ವಾಗತ—

ಆಕೆಯ ಈ ಪರಿಸ್ಥಿತಿಯಲ್ಲಿ ಆಕೆಗೆ ಆಶ್ರಯವೀಯಲು ಸುಧಾಕರ ಮತ್ತು ರಮೇಶ—ಈ ಇಬ್ಬರೂ ಮುಂದೆ ಬಂದಾಗ ಯಾರನ್ನು ಆಕೆ ಆಶ್ರಯಿಸ ಬೇಕು?

ಸರಳೆ ಅವರಿಬ್ಬರಲ್ಲಿ ಯಾರೊಬ್ಬನ ಅಧೀನಳಾಗುವ ಮೊದಲೇ ಆಕೆ ಮತ್ತೊಂದು ಪ್ರಶ್ನೆಗೆ ಉತ್ತರ ಕೊಡಬೇಕಾಗಿತ್ತು. ಆಕೆಯ ಪ್ರೇಮಲತೆ ಯಾವ ತರುವನ್ನು ಅಡರಿದೆ ಎಂದು ನೋಡಿಕೊಳ್ಳಬೇಕಾಗಿತ್ತು. ಆಕೆಯ ದುಃಖವಿಮೂಢ ಮನಸ್ಸು ಆ ಪರಿಸ್ಥಿತಿಯಲ್ಲಿ ಶಕ್ತವಾಗಿದ್ದಿಲ್ಲ. ಆಕೆಗೆ ಹತ್ತು ವರ್ಷಗಳಾಗುವ ಮೊದಲು ಎಳೆತನದಲ್ಲಿ ಆಕೆ ರಮೇಶ ಮತ್ತು ಸುಧಾಕರ ಇಬ್ಬರೊಡನೆಯೂ ಕೂಡಿಯಾಡುತ್ತಿದ್ದಳು. ಆಗ ಆಕೆಗೆ ಇಬ್ಬರೂ ಗೆಳೆಯರೇ ಆಗಿದ್ದರು. ಅನಂತರದ ಆಕೆಯ ಕೌಮಾರ್ಯ ಯೌವನಗಳಲ್ಲಿ ಇಬ್ಬರ ಸಾಹಚರ್ಯವೂ ದೊರೆತಿರಲಿಲ್ಲ. ಆದುದರಿಂದ ಆಕೆಯ ಹೃದಯದಲ್ಲಿ ಗುಪ್ತಗಾಮಿನಿಯಾಗಿ ಹರಿಯುವ ಪ್ರೇಮದ ನೆಲೆ ಯನ್ನು ಕಂಡುಕೊಳ್ಳುವುದೂ ಆ ಪರಿಸ್ಥಿತಿಯಲ್ಲಿ ಆಕೆಗೆ ಕಷ್ಟವಾಗಿತ್ತು. ಆದರೆ, ಅದನ್ನು ಆಕೆ ಆಗಲೇ ನಿರ್ಧರಿಸಬೇಕಾಗಿತ್ತು. ಅದರಲ್ಲಿ ಪ್ರಮಾದ ಸಂಭವಿಸಿದರೆ ಆಕೆ ಆಜೀವಪರ್ಯಂತ ದುಃಖದಲ್ಲಿರಬೇಕು. ಆದು ಆಕೆಯ ಬಾಳ್ವೆಯ ಸಂಧಿಕಾಲ.

ಸುಧಾಕರನ ಭವಿಷ್ಯವೂ ಸರಳೆಯ ನಿರ್ಧಾರವನ್ನೇ ಹೊಂದಿಕೊಂಡಿ ತ್ತೆಂದ ಮೇಲೆ, ಅವನ ಬಾಳ್ವೆಯಲ್ಲಿಯೂ ಸಂಧಿಕಾಲ ಸಮೀಪಿಸಿತ್ತು. ತವರು ಬಹಿಷ್ಕಾರ ಹಾಕಿದ ಸರಳೆಯ ಮನೆಗೆ ಸುಧಾಕರ ಹೋದ ಮೇಲೆ ತನ್ನ ಮನೆಯಿಂದ ಅವನಿಗೆ ಬಹಿಷ್ಕಾರ ದೊರಕುವುದಂತೂ ನಿಸ್ಸಂದೇಹವಾಗಿತ್ತು. ಆದರೂ ಸರಳೆಯನ್ನು ಪರೀಕ್ಷಿಸಲು ಆಕೆ ಅವ ಳೆಡೆಗೆ ಬಂದಿದ್ದ.

ಸುಧಾಕರನ ಬಗೆಯ ಬಳ್ಳಿಯ ಭವಿಷ್ಯ, ಸರಳೆಯ ಮನದ ಹಂದರ ವನ್ನಾಶ್ರಯಿಸಿತ್ತು!

ಸರಳೆಯ ಆಶ್ರಯದಾತನಾಗಿ ಬಂದಿದ್ದ ರಮೇಶ ಆಕೆಯನ್ನು ಆಗಲೇ ತನ್ನ ಸಿರಿವಂತಿಕೆಯಮನೆಗೆ ಒಯ್ಯುವವನಿದ್ದ. ಆದುದರಿಂದ ಸುಧಾಕರ ಅದಕ್ಕೆ ಮೊದಲೇ ಆಕೆಯ ಪ್ರೇಮಪರೀಕ್ಷೆ ಮಾಡಬೇಕಾ

ಗಿತ್ತು. ಈಗ ರಮೇಶನೂ ಗುಡಿಸಲಿನಿಂದ ಹೊರಗಿದ್ದ. ಸರಳೆ—ಸುಧಾ
ಕರ, ಇಬ್ಬರೇ ಗುಡಿಸಲಿನಲ್ಲಿ!

ಆದರೂ ಸುಧಾಕರ ಮೌನವಾಗಿದ್ದ. ಅವನ ಬಾಯಿಯಿಂದ
ಒಂದೂ ಮಾತು ಹೊರಡಲಿಲ್ಲ.

ಇನ್ನು ಸರಳೆ?

ಕಡೆಗೆ ಹೇಗೋ ಚೈತನ್ಯವನ್ನು ಒಟ್ಟುಗೂಡಿಸಿ ಸುಧಾಕರ ಹೇಳ
ತೊಡಗಿದನು. ಸರಳೆಯ ಮುಖವನ್ನು ದೃಷ್ಟಿಸಿ ನೋಡುವ ಧೈರ್ಯ ಅವ
ನಲ್ಲಿರಲಿಲ್ಲ. ಆತ ಈ ಎಂಟು ವರುಷಗಳಿಂದಲೂ ಸರಳೆಗೆ ಅಪರಾಧ
ಮಾಡುತ್ತಾ ಬಂದಿದ್ದಾನೆ!

"ಮನೆಯವರ ಮಾತಿಗೆ ಕಟ್ಟು ಬಿದ್ದು ಈ ಎಂಟು ವರುಷಗಳಿಂದ
ನಿನ್ನನ್ನು ನೋಡದೇ ಇದ್ದುದು ನನ್ನ ತಪ್ಪು ಸರಳಾ. ನನ್ನನ್ನು ಕ್ಷಮಿಸ
ಬೇಕು. ಇನ್ನೂ ನಿನ್ನಲ್ಲಿ ಕೇಳುವ ಮಾತುಗಳಿವೆ........"

ಸುಧಾಕರ ಸ್ವಲ್ಪ ತಡೆದ. ಆದರೆ ಸರಳೆ ಉತ್ತರಿಸಲಿಲ್ಲ. ಉತ್ತರ
ಕೊಟ್ಟಿದ್ದರೂ, "ನಿನ್ನನ್ನೇನು ಕ್ಷಮಿಸುವುದು? ಎಲ್ಲಾ ನನ್ನ ಗ್ರಹಚಾರ."
ಎಂದಷ್ಟೇ ಹೇಳುತ್ತಿದ್ದಳಲ್ಲದೆ, ಬೇರೇನು ಹೇಳಬಲ್ಲಳು?

"ಆಗ, ನನಗೂ ರಮೇಶನಿಗೂ ಆದ ಮಾತುಕತೆ ನೀನು ಕೇಳಿದೆ.
ಆದರೆ, ನಿನ್ನಲ್ಲಿ ಅಷ್ಟು ಬಳಸಿ ಮಾತಾಡುವುದಿಲ್ಲ—ಸ್ಪಷ್ಟ ಹೇಳುತ್ತೇನೆ.
ಹೇಳಲೇನು ಸರಳಾ?"

ಸರಳಾ ಈಗಲೂ ದನಿಗೊಡಲಿಲ್ಲ. ಸುಧಾಕರನ ಹೃದಯ ಕಾತುರ
ದಿಂದ ಬಡಿದುಕೊಳ್ಳುತ್ತಿತ್ತು. ಆತ ಸರಳೆಯ ಮುಖ ನೋಡಬಯಸಿ
ಅತ್ತ ದೃಷ್ಟಿ ತಿರುಗಿಸಿದ. ಆದರೆ ಅಲ್ಲಿ ಕತ್ತಲು ಕವಿದಿತ್ತು.

ಸುಧಾಕರ ಸರಳೆಯ ಉತ್ತರಕ್ಕಾಗಿ ಕಾದಿದ್ದ. ಆಕೆಯಿಂದ ಉತ್ತರ
ಬಾರದೆ ಮುಂದೆ ಮಾತು ಹೇಳಲಾರದಾಗಿದ್ದ. ಇದನ್ನು ತಿಳಿದು ಸರಳೆ
ಮೆಲ್ಲನೆ "ಹೂಂ" ಎಂದಳು.

ಸುಧಾಕರ ಮೆಲ್ಲಮೆಲ್ಲನೆ ತಡೆದು ತಡೆದು ಹೇಳಿದ: "ಸರಳಾ,
ಇದು ಬಹಳ ದೊಡ್ಡ ಆಭಾಸವಾಗಿ ಕಾಣಬಹುದು. ಆದರೂ ಹೇಳು

ತ್ತೇನೆ. ನನ್ನಲ್ಲಿ ರಮೇಶನಂತೆ ಹಣವಿಲ್ಲ. ನನ್ನ ರೂಪ, ಗುಣ ನಿನಗೆ ತಿಳಿದಿದೆ. ಆದರೆ ಅದಕ್ಕಿಂತ ದೊಡ್ಡದಾಗಿ........ಸರಳಾ, ನನ್ನ ಹೃದಯ ಪ್ರೇಮದಿಂದ ತುಂಬಿದೆ........ನಾನು ನಿನ್ನ ಸೋದರಮಾವನ ಮಗನು. ನನಗೆ ನೀನು ನಿಜವಾಗಿ ಬಾಳ ಗೆಳತಿಯಾಗಿ ಬರಬೇಕಾಗಿದ್ದವಳು. ಆದರೆ ಆ ಅಧಿಕಾರದಿಂದ ಕೇಳುತ್ತಿಲ್ಲ ನಾನು. ನನ್ನ ಪ್ರೇಮದ ಅಧಿಕಾರಕ್ಕಾಗಿ ಕೇಳುತ್ತೇನೆ. ನನ್ನ ಚಿರಸಂಗಿನಿಯಾಗುವೆಯಾ?"

ಸುಧಾಕರನ ಪ್ರೇಮಭಿಕ್ಷೆ ಎಷ್ಟು ಶಾಂತ! ಎಷ್ಟು ಅನುದ್ವೇಗ ಪೂರ್ಣ! ಅದು ಅವನ ಸಾಧುಹೃದಯವನ್ನು ತೆರೆದು ತೋರುತ್ತಿತ್ತು—ಆತ ಸರಳೆಯನ್ನು ನಿರ್ಬಂಧಪಡಿಸಲು ಇಚ್ಛಿಸಲಿಲ್ಲ. ಸರಳೆಯ ಉತ್ತರ ಇನ್ನೂ ಬಾರದುದರಿಂದ ಸುಧಾಕರ ಮೊದಲಿನ ಧಾಟಿಯಲ್ಲಿಯೇ ಹೇಳತೊಡಗಿದ; "ನೀನು ಆಗುವೆಯೆಂಬ ಭರವಸೆ ನನಗೂ ಇಲ್ಲ. ಹಾಗಾದರೆ ಮಾತ್ರ, ಅದು ನನ್ನ ಬಾಳ್ವೆಯ ಅಮೃತೋದಯ! ಆದರೆ, ಹಾಗಾಗಲಾರದು. ಬಡತನದಿಂದ ಹಸಿದ ನಿನ್ನ ಕಣ್ಣುಗಳಿಗೆ ರಮೇಶನ ಧನಧಾನ್ಯ ತೋರುವುದು ಸಹಜ. ಆದರೆ, ಧನಿಕರ ಸಹವಾಸ—ಎಚ್ಚರಿಕೆಯಿಂದಿರಬೇಕು........"

"ಏನು ಮಾಡುವೆ ಸರಳಾ, ಒಮ್ಮೆ ಹೇಳುವೆಯಾದರೆ ಹೇಳು...."

"ತಾಯಿ ನನ್ನನ್ನು ಅವರಿಗೆ ಅರ್ಪಿಸಿದ್ದಾಳೆ. ತಾಯಿಯ ಕೊನೆಯ ಮಾತನ್ನು ಮೀರುವ ಧೈರ್ಯ ನನಗಿಲ್ಲ." ಎಲ್ಲಾ ಪ್ರಶ್ನೆಗಳಿಗೂ ಉತ್ತರವನ್ನು ತನ್ನ ಒಂದೇ ಮಾತಿನಲ್ಲಿ ಅಡಗಿಸಿ ಹೇಳಿದಳು ಸರಳೆ.

ಸುಧಾಕರನಿಗದು ಅರಿಯಿತು. ಆತ ಅಪ್ರತಿಭನಾಗಲಿಲ್ಲ. ಆತ ಆ ಉತ್ತರವನ್ನು ನಿರೀಕ್ಷಿಸಿಯೇ ಇದ್ದ. ಅದಕ್ಕೆ ಬದಲು ಸರಳೆ ಆಗ ಆತನಲ್ಲಿ ಪ್ರೇಮ ತೋರಿಸಿದ್ದರೆ, ಅವನಿಗೆ ಆಶ್ಚರ್ಯ ಕಾಣುತ್ತಿತ್ತು.

"ಹಾಗಾದರೆ ನನ್ನನ್ನು ನೀನು ಕ್ಷಮಿಸಲಿಲ್ಲ. ಇರಲಿ....ನಿನ್ನ ಇಚ್ಛೆ ಇದ್ದಂತಾಗಲಿ. ಆದರೆ, ಎಂದಾದರೊಂದು ದಿನ ಈ ಸುಧಾಕರ ನಿನಗೆ ಬೇಕಾಗಿ ಬಂದರೆ ಆಗ ನಾನು ಸರ್ವ ಎಡರುಗಳನ್ನೂ ಕಳಚಿ ನಿನ್ನ ಬಳಿಗೆ ಧಾವಿಸುವವನೇ............ನಿನ್ನ ತಾಯಿ ಸತ್ತ ಈ ಗಳಿಗೆಯಲ್ಲೇ ಇದನ್ನು ನಾನು ಕೇಳಿ ನಿನ್ನ ಮನಸ್ಸಿಗೆ ಗಾಸಿ ಮಾಡಿದೆ. ಅದಕ್ಕೆ ಕ್ಷಮೆ ಇರಲಿ—

ನಾನು ಹೋಗುತ್ತೇನೆ. ನೀನು ಸುಖದಿಂದಿರು" ಎನ್ನುತ್ತಾ ಸುಧಾಕರ ಗುಡಿಸಲ ಹೊರಗೆ ಕಾಲಿಕ್ಕಿದ.

ಸರಳೆಯ ಹೃದಯ ಕುಸಿದಂತಾಯಿತು. "ಎಲ್ಲಿಗೆ ಹೋಗುವೆ, ಭಾವಾ?" ಎಂದು ಕೇಳಿದಳು ಕಾತರದಿಂದ.

"ವಿಶಾಲ ವಿಶ್ವದಲ್ಲಿ ಎಲ್ಲಿಗಾದರೂ— ನನ್ನ ಮನೆಯಲ್ಲಿ ನನ್ನನ್ನು ಇನ್ನು ಹಿಡಿದಿರಿಸುವವರಿಲ್ಲ........"

ಸರಳೆಗೆ ಕಣ್ಣೀರುಕ್ಕಿತು. ಆತ ತನ್ನನ್ನು ಪ್ರೇಮಿಸಿ ಬಂದವನು— ಅವನಿಗಿನ್ನು ವನವಾಸವೇ ಗತಿ!

ಸುಧಾಕರ ಭರದಿಂದ ನಡೆಯುತ್ತಿದ್ದ. ಆಗ, ಅವನಿಗೆದುರಾಗಿ ರಮೇಶ ಆ ಗುಡಿಸಲಿಗೆ ಹಿಂದಿರುಗುತ್ತಿದ್ದ. ಸುಧಾಕರ ಆತನನ್ನೊಮ್ಮೆ ಈಕ್ಷಿಸಿ, "ಹೋಗುವೆ" ಎನ್ನುತ್ತಾ ನಿಲ್ಲದೆ ಹೊರಟು ಹೋದ. ಅವನ ಧ್ವನಿ ಗಂಭೀರವಾಗಿತ್ತು.

ರಮೇಶನಿಗೆ ಆಶ್ಚರ್ಯವಾಯಿತು. ಅನಂತರ, ಸುಧಾಕರನ ಬಗೆಗೆ ತಿರಸ್ಕಾರ ಮೂಡಿತು. ಗುಡಿಸಲಿಗೆ ಬಂದವನೇ ಸರಳೆಯನ್ನುದ್ದೇಶಿಸಿ ಹೇಳಿದ: "ಧೂರ್ತ, ತಾಯಮ್ಮನಿಗೆ ಔಷಧ ಕೊಟ್ಟು ಬದುಕಿಸಲು ಬಡವನೆಂದಾದರೆ, ಆಕೆಯ ಅಂತ್ಯಕ್ರಿಯೆ ಮಾಡಲು ಮಾತ್ರ ಹಣವಿದೆ ಈತನ ಬಳಿ. ಹೊರಟು ಹೋದನಲ್ಲ ಸದ್ಯಃ...." ರಮೇಶ ಹೇಳಿದವನೇ, ಸರಳೆಯ ಕಣ್ಣಲ್ಲಿ ಕಂಬನಿ ಹನಿಯುತ್ತಿದ್ದುದನ್ನು ನೋಡಿ ಚಕಿತನಾದ!

೪

ರಮೇಶನ ದೊಡ್ಡದಾದ ಮನೆಯ ಹೊರಗಿನ ಹಜಾರದಲ್ಲಿ ಕುಳಿತುಕೊಂಡು ಸರಳೆ ಹೂವಿನ ಹಾರ ಹೆಣೆಯುತ್ತಿದ್ದಳು. ರಮೇಶನೊಡನೆ ಸರಳೆಯು ಕುಸುಮಳ್ಳಿಯ ಆ ಮನೆಗೆ ಬಂದಿರತೊಡಗಿ ಒಂದು ತಿಂಗಳು ಕಳೆದಿತ್ತು. ಆಕೆಯ ಮನಸ್ಸಿನಿಂದ ಮಾತೃಶೋಕ ಮೆಲ್ಲಮೆಲ್ಲನೆ ಮರೆಯಾಗುತ್ತಿತ್ತು.

ಹಾರ ಹೆಣೆಯುತ್ತಿದ್ದಂತೆಯೇ ಸರಳೆಯ ಮನಸ್ಸಿನಲ್ಲಿ ಅನೇಕ ವಿಚಾರಗಳು ಬಂದು ಹೋಗುತ್ತಿದ್ದುವು. "ಹೂವಿನ ಹಾರ ಹೆಣೆದು

ರಮೇಶನ ಕುತ್ತಿಗೆಗೆ ಹಾಕಬೇಕು; ಆಗ ಅವನು ಬೆರಗಿನಿಂದ ನನ್ನತ್ತ ತೆರೆಗಣ್ಣುಗಳಿಂದ ನೋಡುವನು; ಅವನು ಆ ಅಭಿಮಾನದಿಂದ ಹಿಗ್ಗಿದ ಕಣ್ಣುಗಳಿಂದ ನನ್ನನ್ನು ನೋಡುವಾಗ ನನ್ನ ಮನಸ್ಸು ಹಿಗ್ಗಿನಿಂದ ನಲಿದೀತು!" ಎಂದು ಯೋಚಿಸುತ್ತಿದ್ದಳು ಸರಳೆ. ಆಕೆಯ ಮನಸ್ಸಿನ ಎದುರಿಗೆ ಆಗ ತನ್ನನ್ನು ಅಭಿಮಾನಪೂರ್ಣ ದೃಷ್ಟಿಯಿಂದ ನೋಡುತ್ತಿರುವ ರಮೇಶನ ಮೂರ್ತಿ ನಿಂತಿತ್ತು.

ಮನೆಯ ಹೊರಗೆ ಮಳೆ ಎಡೆಬಿಡದೆ ಸುರಿಯುತ್ತಿತ್ತು. ಗಾಳಿಯೊಮ್ಮೆ ಮಳೆಯ ಶೀತಲ ಹನಿಗಳೊಡನೆ ಮನೆಯೊಳಗೆ ಬೀಸಿ ಸರಳೆಯನ್ನು ಚಳಿಯಿಂದ ನಡುಗಿಸಿದಾಗ ಹಾರ ಹೆಣೆಯುತ್ತಿದ್ದ ಆಕೆಯ ಕೈಯು ಒಂದು ಕ್ಷಣ ತಡೆಯಿತು. ಆಕೆಯ ಮನಸ್ಸಿನಲ್ಲಿ ಕುಣಿಯುತ್ತಿದ್ದ ರಮೇಶನ ಮೂರ್ತಿಯನ್ನು ಬದಿಗೆ ಸರಿಸಿ ಇನ್ನೊಂದು ಮೂರ್ತಿ ಅಲ್ಲಿ ತಲೆಯೆತ್ತಿತು. ಅದೇ ಸುಧಾಕರನ ಮೂರ್ತಿ. ಸರಳೆಯ ಯೋಚನೆ ಬದಲಾಯಿತು.

ಸರಳೆಯ ಮನೋಭಾವ ಮತ್ತೆಮತ್ತೆ ಸುಧಾಕರನ ಸ್ವಭಾವಚಿತ್ರವನ್ನು ಚಿತ್ರಿಸತೊಡಗಿತ್ತು. ಆಕೆಗೂ ಬಡ ಸುಧಾಕರನ ಪ್ರೇಮಭಿಕ್ಷೆಯ ಬಗೆಗೆ ಅನುಕಂಪ ಮೂಡತೊಡಗಿತು. ಅಂದು........ಆ ದಿನ........ ತಾಯಿಯ ಮರಣದ ಮರುದಿನ—"ಬಡತನದಿಂದ ಹಸಿದ ಕಣ್ಣುಗಳಿಗೆ ಧನಧಾನ್ಯದ ಇರವು ಕಾಣುವುದು ನಿಜ" ಎಂದು ಸುಧಾಕರ ನುಡಿದ ನುಡಿ! ಹಾಗೂ ಅವನ ಪ್ರೇಮಭಿಕ್ಷೆಯ ದೀನವಾಣಿ! ಅವಳನ್ನು ಮತ್ತೂ ಚಿಂತೆಗೀಡುಮಾಡಿತ್ತು. ಹಾಗೆಯೇ ಅವಳು ಚಿಂತಿಸುತ್ತಾ—

"ನಾನು ಸಿರಿವಂತಿಕೆಯ ಬಿಸಿಲುಗುದುರೆಯನ್ನು ನಂಬಿ ರಮೇಶನ ನೆಲೆಯನ್ನು ಆಶ್ರಯಿಸಿದೆನೇ? ಹಾಗಲ್ಲದಿದ್ದಲ್ಲಿ ತಾಯಿಯ ಅಂತಿಮ ವಚನಕ್ಕೆ ತಲೆವಾಗಿ ರಮೇಶನನ್ನು ಸೇರಿದೆನೇ? ಹೌದು . . . . ಈ ವಿಷಯದಲ್ಲಿ ಸುಧಾಕರನಂತೂ ನಿರ್ಭಾಗ್ಯ! ಆದರೆ ಆತ ನನಗಾಗಿ ಏನುತಾನೇ ತಪ್ಪು ಮಾಡಿದ್ದ? ತಪ್ಪು ಮಾಡುವುದಾದರೂ ಹೇಗೆ? . . . . ನಿಜ . . . . ಅವನನ್ನು ದೂರ ಮಾಡಿದವಳು ನಾನು. ಶ್ರೀಮಂತನೆಂದುಸುರದಿದ್ದರೂ ತಾಯಿಯ ವಚನಕ್ಕೆ ಕಟ್ಟುಬಿದ್ದು ಅವನನ್ನು ಕಡೆಗಣಿಸಿದವಳು ನಾನು!

2

ಬಡತನದ ಬೇಗೆಯಲ್ಲಿ ಬಳಲಿದುದು ಅವನ ತಪ್ಪಲ್ಲ. ಅದಕ್ಕಾಗಿ ನಾನು ಸಿರಿವಂತನಾಶ್ರಯುವನ್ನು ಸೇರಲೂ ಇಲ್ಲ.......ಚಿಕ್ಕಂದಿನಿಂದಲೂ ಬಡವನಾದುದು ಸುಧಾಕರನ ತಪ್ಪೇ? ಸುಧಾಕರ ಅಂದಿನಿಂದಲೂ ನನಗಾಗಿ ಎಷ್ಟು ಪ್ರೀತಿದೋರುತಿದ್ದ! ಅವನ ತಂದೆತಾಯಿ ಗದರಿಸಿದರೂ ಅವರಿಗೆ ಕಾಣದಂತೆ ನಮ್ಮ ಗುಡಿಸಲಿಗೆ ಬರುತ್ತಿದ್ದ! ಅದೂ ನನಗಾಗಿ! ಪ್ರೇಮದಿಂದ ತುಂಬಿ ನಿಂತ ಹೃದಯವುಳ್ಳ ಅವನಿಗೆ ನನ್ನಿಂದ ಎಷ್ಟು ಆಶಾಭಂಗವಾದಂತಾಯಿತು!"

ಸರಳೆಯ ಮನಸ್ಸಿನಲ್ಲಿ ವಾದವಿವಾದಗಳ ವಿಚಾರಸರಣಿ ನೃತ್ಯಮಾಡುತ್ತಿತ್ತು. ತಾರುಣ್ಯದ ಬಯಕೆಯಲ್ಲಿ ಒಂದು ಕ್ಷಣಕ್ಕೆ ಒಂದು ವಿಚಾರವಿದ್ದರೆ ಮರುಕ್ಷಣದಲ್ಲಿ ಅದು ಬದಲಾಗುವುದು ಸಹಜ. ಅಂತೆಯೇ ಸುಧಾಕರನಿಗಾಗಿ ಕಳವಳಿಸುತಿದ್ದ ಸರಳೆಯ ಹೃದಯ ಬದಲಾಯಿತು.

"ನನ್ನನ್ನು ಸುಧಾಕರ ಪ್ರೀತಿಸಿದ. ನಾನು ಆತನನ್ನು ಪ್ರೀತಿಸಲಿಲ್ಲ; ರಮೇಶನನ್ನು ಪ್ರೀತಿಸಿದೆ. ಮೆಚ್ಚಿದವರಿಗೆ ಪ್ರೇಮವನ್ನು ಮೆಚ್ಚುಗಾಣಿಕೆ ಕೊಡುವ ಹಕ್ಕು ಎಲ್ಲರಂತೆ ನನಗೂ ಇದೆ. ನನ್ನ ಜೀವನದ ಸಾರ್ಥಕತೆಗಾಗಿ ನಾನು ರಮೇಶನ ಆಶ್ರಯದಲ್ಲಿ ನಿಲ್ಲುವೆ.......ಸುಧಾಕರ ನನ್ನನ್ನು ಪ್ರೇಮಿಸಿದನು ನಿಜ!—ನನ್ನನ್ನು ಎಂದರೆ ನನ್ನ ರೂಪವನ್ನು! ಅವನಿಗೆ ಒಲಿಯದಿದ್ದರೆ ನಾನವನಿಗೆ ದ್ರೋಹ ಬಗೆದಂತೆ ಆಯಿತೇ? ಇಲ್ಲ....ಇಲ್ಲ ........ಎಂದಿಗೂ ಇಲ್ಲ" ಈ ವಿಚಾರದಿಂದ ಸರಳೆ ತನ್ನ ಮನಸ್ಸಿನಲ್ಲಿ ಧೈರ್ಯವನ್ನು ತಂದುಕೊಂಡಳು.

ಹಾರ ಹೆಣೆಯುವ ಕೆಲಸ ಮುಗಿದಂತೆಯೇ ಯೋಚಿಸುವ ಕಾರ್ಯವೂ ಮುಗಿದಿತ್ತು ಸರಳೆಗೆ. ಇನ್ನು ಆ ಹಾರವನ್ನು ಮೆಲ್ಲನೆ ಹಿಂದಿನಿಂದ ಹೋಗಿ ರಮೇಶನ ಕೊರಳಿಗೆ ತೊಡಿಸಬೇಕು ಎಂಬಾಸೆ ಮೊದಲಾಯಿತು. ಆಗ ಬೆರಗಿನಿಂದ ಆತ ತನ್ನನ್ನು ನೋಡುವನು! ಎಂಬ ಬಯಕೆಯನ್ನು ಬಯಸಿದಳು. ಅಭಿಮಾನದಿಂದ ತುಂಬಿದ ಆ ತೆರೆಗಣ್ಣುಗಳ ನೋಟದಿಂದ ಅದು ವ್ಯಕ್ತವಾಗತೊಡಗಿತು. ಸರಳೆಯ ಮನಸ್ಸು ಅಂತಹ ರಮೇಶನ ಚಿತ್ರವನ್ನು ತನ್ನ ಹೃದಯದಲ್ಲಿ ಕಲ್ಪಿಸಿಕೊಂಡಿತು. ಅಂತೆಯೇ ಸರಳೆ ಹೊಸ ಉತ್ಸಾಹದಿಂದ ಹಾರವನ್ನು ಕೈಯಲ್ಲಿ ಹಿಡಿದುಕೊಂಡು ರಮೇಶನ ಕೋಣೆಯತ್ತ ಮೆಲ್ಲಮೆಲ್ಲನೆ ಹೆಜ್ಜೆಯಿಟ್ಟಳು.

ಸರಳೆ ಸದ್ದು ಮಾಡದೆ ರಮೇಶನ ಕೋಣೆಯೊಳಗೆ ಕಾಲಿಟ್ಟಳು. ಸುತ್ತಮುತ್ತ ನೋಡಿದಳು. ರಮೇಶನ ಸುಳಿವು ಕಾಣಲಿಲ್ಲ. ಅಲ್ಲಿಯೇ ಇದ್ದ ಅವನ ಚಿತ್ರಪಟದ ಮೇಲೆ ಅವಳ ಕಣ್ಣು ಸರಿಯಿತು. ಮುಗುಳ್ನಗೆಯಿಂದ ಕೂಡಿರುವ ಆ ರಮೇಶನ ಮುಖವನ್ನು ಆ ಚಿತ್ರಪಟದಲ್ಲಿ ಅವಳು ಕಂಡಾಗ ಅವಳ ಮನಸ್ಸು ಸಂತಸದಲ್ಲಿ ತುಂಬಿ ಲೀನವಾಯಿತು. ತನ್ನ ಹೆಜ್ಜೆಯನ್ನು ಮುಂದೆ ಮುಂದೆ ಇಡಲು ಪ್ರಯತ್ನಪಟ್ಟಳು. ಚಿತ್ರಪಟದಲ್ಲಿರುವ ರಮೇಶ ತನ್ನನ್ನು ನೋಡಿ ನಗುವನೋ ಎಂದು ಅವಳಿಗೆ ಭಾಸವಾಗುತ್ತಿತ್ತು. ಆದರೂ ಆ ಚಿತ್ರಪಟದಲ್ಲಿ ರಮೇಶನ ಯೌವನದ ವೈಯ್ಯಾರ, ಸಿರಿವಂತಿಕೆಯಿಂದ ಕೂಡಿದ ಸೊಬಗು, ಅವಳ ಮನಸ್ಸನ್ನು ಸೆಳೆದಿತ್ತೆಂದೇ ಹೇಳಬಹುದು. ಹಾರವನ್ನು ಚಿತ್ರಕ್ಕೇ ಹಾಕಿ ನೋಡಬೇಕೆಂಬಾಸೆ ಮೂಡಿತು. ತಾರುಣ್ಯದ ಮನವಲ್ಲವೇ ಅದು? ಹಾರವು ಚಿತ್ರಪಟದತ್ತ ಸಾಗಿತು. ಮುಂದೆ ಮುಂದೆ ನಡೆದು ಹೋದಳು. ಆದರೆ ಹಾಗೆ ಹೋಗುತ್ತಾ ಇರುವಾಗ ಅಲ್ಲಿದ್ದ ಮೇಜಿನ ಮೇಲೆ ಒಂದು ಪತ್ರವು ಕಾಣಬಂತು. ಅದನ್ನೊಮ್ಮೆ ನೋಡಿಬಿಡಲೇ ಎಂಬ ಆಸೆ ಆಕೆಯ ಮನದಲ್ಲಿ ಮೂಡಿತು.

ಮೆಲ್ಲನೆ ತುದಿಗಾಲಿನಲ್ಲಿ ಸದ್ದಾಗದಂತೆ ನಡೆದು ರಮೇಶ ಕುಳಿತುಕೊಳ್ಳುವ ಕುರ್ಚಿಯ ಹಿಂಬದಿಯಲ್ಲಿ ನಿಂತು ಬಾಗಿ ನೋಡಿದಳು—ರಮೇಶನ ಪತ್ರವನ್ನು ಕೈಯ್ಯಲ್ಲಿ ಹಿಡಿದುಕೊಂಡು ಓದುತ್ತಾ ಯೋಚನಾ ಮಗ್ನಳಾಗಿ ನಿಂತುಬಿಟ್ಟಳು. ಪತ್ರದ ತುದಿಯಲ್ಲಿ "ಪ್ರಿಯತಮಾ!" ಎಂದು ಬರೆದಿತ್ತು. ಸರಳೆಯ ಕುತೂಹಲ ಇಮ್ಮಡಿಸಿತು.—ರಮೇಶನನ್ನು "ಪ್ರಿಯತಮಾ" ಎಂದು ಕರೆವವರಾದರೂ ಯಾರು? ಕುತೂಹಲಾವಿಷ್ಟಳಾದ ಆಕೆ ಪತ್ರದ ತುದಿಯಿಂದ ಕಡೆಯ ವರೆಗೆ ಕಣ್ಣೋಡಿಸಿದಳು.

"ಪ್ರಿಯತಮಾ! ಅಲ್ಲಿಯೇ ನಿಂತು ಏಕಿಷ್ಟು ತಡಮಾಡುವಿರಿ? ಇಲ್ಲಿ ಏಕಾಂಗಿಯಾದ ನನಗೆ ಬೇಸರ ಹಿಡಿದಿದೆ. ಆ ಹಳ್ಳಿಯಲ್ಲಿ ಇಲ್ಲಿಗಿಂತಲೂ ಹೆಚ್ಚು ಆಕರ್ಷಣೀಯವಾದುದಾದರೂ ಏನಿರಬಹುದು? ಕೈಹಿಡಿದವಳನ್ನೂ ಮರೆತು ತಿಂಗಳುಗಟ್ಟಲೆ ಅಂತಹ ಹಳ್ಳಿಗಾಡಿನಲ್ಲಿ ವಾಸಿಸಬೇಕಾದರೆ.... ಏನು ಕಾರಣವಿರಬಹುದು—ಎಂದು ಪ್ರತಿದಿನವೂ ಯೋಚಿಸುತ್ತಿದ್ದೇನೆ.

ಕಪ್ಪು ಬಣ್ಣದವಳು, ಎಂದು ನಿತ್ಯವೂ ನನ್ನನ್ನು ಹಂಗಿಸುತ್ತಿದ್ದಿರಿ. ಹಾಗಿರುವಾಗ ಅಲ್ಲಿ ಯಾರಾದರೂ ಬೇರೆ ಬಿಳಿ ಬಣ್ಣದವರು....ಛೀ........ಈ ಯೋಚನೆ ಮನಸ್ಸಿಗೆ ಬಂದ ಕೂಡಲೇ ಅದನ್ನು ಅಷ್ಟಕ್ಕೆ ತಳ್ಳಿ ಹಾಕುತ್ತಿದ್ದೇನೆ. ನಿಮ್ಮ ಪ್ರೇಮದಲ್ಲಿ ನಾನು ವಿಕಲ್ಪವೆಣಿಸಿದರೆ ಅದಕ್ಕಿಂತ ದೊಡ್ಡ ಪಾತಕ ಬೇರಾವುದಾದರೂ ಇದ್ದೀತೇ? ಬೇಗ ಒಮ್ಮೆ ಬರಬಾರದೇ?........"

ಸರಳೆಗೆ ಮುಂದೆ ಓದಲು ಕಣ್ಣು ಓಡಲಿಲ್ಲ. ಪತ್ರದ ಬುಡವನ್ನು ಮಾತ್ರ ನೋಡಿದಳು. ಅಲ್ಲಿ—"ನಿಮ್ಮ ಬಾಳ ಗೆಳತಿ, ಸುಮಿತ್ರಾ" ಎಂದು ಬರೆದಿತ್ತು. "ಬಾಳ ಗೆಳತಿ, ಸುಮಿತ್ರಾ!"

ಕೊಡಲಿಯೇಟಿನಂತೆ ಈ ಶಬ್ದಗಳು ಸರಳೆಯ ತಲೆಗೆ ಬಿದ್ದುವು. ಆಕೆಯ ಮನಸ್ಸಿನಲ್ಲಿ ಭಯಂಕರ ಬಿರುಗಾಳಿ ಬೀಸತೊಡಗಿತು. ಮುಂಚಿನ ನೆನಸೇನು? ಇಂದಿನ ಕನಸೇನು? ಎಂದು ಅವಳಂತೂ ತನ್ನ ಕಣ್ಣನ್ನೇ ನಂಬಲಿಲ್ಲ. ಕಣ್ಣು ಕತ್ತಲೆಗೂಡಿತು. ಆ ಕೋಣೆಗೆ ಬಂದಂತೆಯೇ ಮತ್ತೆ ಹಿಂತಿರುಗಿ ಹೋಗಲಿಚ್ಛಿಸಿದಳು. ಆಕೆಯ ಕೈಯಲ್ಲಿ ಹಿಡಿದಿದ್ದ ಹೂವಿನ ಹಾರವಂತೂ ಕೈಜಾರಿ ಬಿದ್ದುಹೋಗಿತ್ತು. ಅಂತೂ ಹೀಗಾಗಿ ಸರಳೆಯ ಪರೀಕ್ಷೆಯ ಕಾಲ ಮರಳಿ ಬಂದಿತ್ತು. ದುಃಖದಿಂದ ತುಂಬಿಬಂದ ಹೃದಯವನ್ನು ಪರೀಕ್ಷಿಸತೊಡಗಿದಳು.

ರಮೇಶನಿಗೆ ಹಳ್ಳಿಯ ಬಂಗಲೆಯಲ್ಲಿದ್ದಾಗ ಆತನ ಪತ್ನಿ ಸುಮಿತ್ರೆಯಿಂದ ಮಂಗಳೂರಿಗೆ ಬೇಗನೆ ಮರಳುವಂತೆ ಪತ್ರಬಂದಿತ್ತು. ಆ ಪತ್ರ ಓದಿಯೇ ಸರಳೆಯ ಮನಸ್ಸಿನ ಮೇಲೆ ಮೋಡ ಕವಿದ ಆಗಸವೇ ಮರಳಿ ಬಿದ್ದಂತಿತ್ತು!

ಸರಳೆ ತನ್ನ ಹಾಸಿಗೆಯಲ್ಲಿ ಮಲಗಿ ಮುಖ ಮುಚ್ಚಿಕೊಂಡು ಅಳುತ್ತಿದ್ದಳು. ಚಿಂತೆ ಇನ್ನೂ ತನ್ನನ್ನು ಬಿಡಲಿಲ್ಲವೆಂದು ದುಃಖಿಸಿದಳು. ತನ್ನ ಪೂರ್ವೋತ್ತರಗಳನ್ನು ವಿಮರ್ಶಿಸಲು ಮತ್ತೆ ಮತ್ತೆ ಅನುವಾಗುತ್ತಿದ್ದಳು. ಮನಸ್ಸಿನ ದುಗುಡ ಒಮ್ಮೆಲೇ ಹೊರವುಕ್ಕಿ ಬಂದಿತೋ ಎಂಬಂತೆ ಕಣ್ಣೀರು ಕರೆಯುವುದೂ ಜಾಸ್ತಿಯಾಯಿತು. ಅಂತೆಯೇ ಅಳುವಿನ ಸ್ವರವೂ ಮತ್ತೆ ಮತ್ತೆ ಕೇಳತೊಡಗಿತು.

"ರಮೇಶ ನಿನಗೇನಾಗಬೇಕು? ಯಾಕೆ ಕೂಗುತ್ತಿದ್ದೀ—ಅವನಿಗಾಗಿಯೇ?" ಸರಳೆ ತನ್ನ ಮನಸ್ಸನ್ನೇ ವಿಚಾರಿಸಿಕೊಳ್ಳುತ್ತಿದ್ದಳು.

"ಆತ ನನ್ನ ರಕ್ಷಕ. ನನ್ನ ತಾಯಿ ನನ್ನನ್ನು ಆತನ ಕೈಗೆ ಒಪ್ಪಿಸಿ ಹೋಗಿದ್ದಾಳೆ. ಆದುದರಿಂದ ಆತ ನನ್ನ ಸಮೀಪಬಂಧು!" ಎಂದಿತು ಆಕೆಗೆ ಆಕೆಯ ಮನಸ್ಸು.

"ರಕ್ಷಕ! ಬಂಧು!—ಎಂದರೆ ಸ್ಪಷ್ಟವಾಗಿ ಅರ್ಥವಾಗಲೊಲ್ಲದು, ಆತನಿಗಾಗಿ ಒಲಿದಿರುವೆಯಾ?"

ಸರಳೆ ಬೆಚ್ಚಿಬಿದ್ದಳು ಈ ಪ್ರಶ್ನೆಯಿಂದ! ಪ್ರೇಮದ ಸಂತಾಪದಲ್ಲಿ ಬಳಲಿದ ಮನಸ್ಸು "ರಕ್ಷಕನನ್ನು ಮೆಚ್ಚಿದುದರಲ್ಲಿ ದೋಷವೇನು?" ಎಂದು ಮತ್ತೆ ಕೇಳಿತು.

"ರಮೇಶನನ್ನು ಪ್ರೇಮಿಸಿದೆ" ಎಂದು ಸ್ಪಷ್ಟವಾಗಿ ಒಪ್ಪಿಕೊಳ್ಳಬಾರದೇ ಈ ಮನಸ್ಸು! ನನ್ನ ಮನಕ್ಕೆ ಅಷ್ಟು ಪ್ರಾಮಾಣಿಕತೆ ಇಲ್ಲವೇ?" ಎಂದುಕೊಂಡಳು.

ಎಂತಹ ಪರಿಸ್ಥಿತಿ! ರಮೇಶನನ್ನು ತಾನು ಪ್ರೇಮಿಸಿದುದನ್ನು ಸರಳೆಯ ಮನಸ್ಸು ನೇರವಾಗಿ ಒಪ್ಪಿಕೊಂಡಿತೇ? ಹೇಗೆ ಒಪ್ಪಿಕೊಂಡೀತು? ಆಕೆ ಬಡವೆ. ಆತ ಶ್ರೀಮಂತ. ಅಲ್ಲದೆ, ಆಕೆ ಆತನ ಆಶ್ರಿತೆ!

"ಆದರೆ ಪ್ರೇಮಕ್ಕೆ ಬಡವ-ಧನಿಕ, ಸ್ವಾಮಿ-ಸೇವಕಿ ಎಂಬ ಮೇಲು ಕೀಳುಗಳಿವೆಯೇ?" ಎಂದು ಮನಸ್ಸನ್ನು ಕೇಳಿದಳು.

"ಇಲ್ಲ........ವಿಶುದ್ಧ ಪ್ರೇಮಕ್ಕೆ ಇಲ್ಲದಿರಬಹುದು ನಿಜ. ಆದರೆ ಲೋಕ ಅದನ್ನು ಒಪ್ಪಿಕೊಳ್ಳಬಹುದೇ?" ಎಂಬುದು ಆಕೆಯ ಪ್ರಶ್ನೆಗೆ ಉತ್ತರ!

"ಲೋಕ! ಯಾವ ಲೋಕ? ಲೋಕಕ್ಕೆ ಅಂಜಿದರೆ ಪ್ರೇಮದ ಸತ್ಯ ಪರೀಕ್ಷೆಯೆಲ್ಲಿ?"

"ಆದರೆ ನನ್ನ ಸ್ಥಿತಿ ಹಾಗಲ್ಲ. ಲೋಕದ ಗೊಡವೆ ನನಗಿರಲಿ ಇಲ್ಲದಿರಲಿ, ನನ್ನ ಪ್ರೇಮವೆಂದರೆ ಅಸ್ತಿಭಾರವಿಲ್ಲದ ಕಟ್ಟಡವಾಯಿತು. ನಾನು ಪ್ರೇಮಿಸಿದ ರಮೇಶ ವಿವಾಹಿತನು. ಆತನ ಹೃದಯ ಎಂದೋ ಪರರಿಗೆ ಮೀಸಲು!" ಎಂದು ಅಂತರಂಗ ಉತ್ತರಕೊಟ್ಟಿತು.

"ಆತ ನಿನ್ನನ್ನು ಪ್ರೇಮಿಸಲಿಲ್ಲವೇ?—ಇನಿತೂ ಕೂಡ?"

"ನಡತೆಯಲ್ಲಿ ಆತ ಪ್ರೇಮದ ಕುರುಹುದೋರುತ್ತಿದ್ದ. ಆದರೆ ಅವನ ಅಂತರಂಗವನ್ನು ಯಾರು ಹೇಗೆ ಹೊಕ್ಕು ನೋಡುತ್ತಾರೆ?"

"ತನ್ನನ್ನು ಪ್ರೇಮಿಸಿದವನಿಗೆ ಪ್ರೇಮಧಾರೆ ಸುರಿದ ತಪ್ಪು ಯಾರದು ನಿನ್ನದೋ ಆತನದೋ?"

"ನನ್ನದು—ನಿಜ. ಆದರೆ ಹಾಗೆ ನನ್ನನ್ನು ಪ್ರೀತಿಸಿದವರು ಯಾರಿದ್ದಾರೆ?"

"ಯಾರೂ ಇಲ್ಲವೇ? ಚೆನ್ನಾಗಿ ಯೋಚಿಸಿ ನೋಡು. ಪಾಲಿಗೆ ಬಂದ ಪಂಚಾಮೃತವನ್ನು ತಿರಸ್ಕರಿಸಿ ಅಮೃತ ಸಿಗಬೇಕೆಂಬ ಬಿಸಿಲು ಗುದುರೆಯೇರಿದವರಿಗೇ ಇದೇ ಶಾಸ್ತಿ!" ಎಂದು ಕಟುವಾಗಿ ಸರಳೆಯ ವಿವೇಕವು ನುಡಿಯಿತು.

ಸರಳೆ ಯೋಚಿಸಿದಳು "ಯಾರಾಗಿರಬಹುದು ತನ್ನ ಪಾಲಿಗೆ ಬಂದ ಆ ಪಂಚಾಮೃತ?" ಎಂದು.

ಫಕ್ಕನೆ ಆಕೆಗೆ ನೆನಪಾಯಿತು—ಒಂದು ತಿಂಗಳ ಮೊದಲು ಆಕೆಯ ಗುಡಿಸಲಲ್ಲಿ ಏಕಾಂತದಲ್ಲಿ ಸುಧಾಕರನು ಆಕೆಯನ್ನು ಪ್ರಾರ್ಥಿಸುತ್ತಿದ್ದುದು; "ನಾನು ನಿನ್ನ ಭಾವ. ಆದುದರಿಂದ ನೀನು ನನ್ನವಳಾಗತಕ್ಕವಳು. ಆದರೆ, ಆ ಅಧಿಕಾರದಿಂದ ನಾನು ಕೇಳುತ್ತಿಲ್ಲ. ನನ್ನ ಹೃದಯದಲ್ಲಿನ ಪ್ರೇಮದ ಅಧಿಕಾರದಿಂದ ಕೇಳುತ್ತಿದ್ದೇನೆ. ಸರಳಾ, ನೀನು ನನ್ನ ಬಾಳಗೆಳತಿಯಾಗುವೆಯಾ?"

ಅದಕ್ಕೆ ಸರಳೆ ಏನೆಂದಿದ್ದಳು? "ರಮೇಶನಿಗೆ ನಾನು ವಿಕ್ರೀತ ದಾಸಿ—ಆತನನ್ನು ಬಿಡಲಾರೆ" ಎಂದೇ? ಹಾಗಲ್ಲದೆ ಇನ್ನೇನು?

ಸುಧಾಕರ ಆಕೆಯನ್ನು ಎಷ್ಟು ಪ್ರೇಮಿಸಿದ್ದ! ಆತನೂ ರಮೇಶನಂತೆಯೇ ಸರಳೆಯ ಬಾಲ್ಯದ ಗೆಳೆಯನು. ಆತ ಆ ಬಾಲ್ಯದ ಪ್ರೀತಿಯನ್ನು ಬೆಳೆಸಿದ. ಆದರೆ ಈ ರಮೇಶ........?

ಪ್ರವಾಹದಲ್ಲಿ ತೇಲಿಹೋಗುವಾಗ ಕೈಗೆ ಸಿಕ್ಕಿದ ಆಸರೆ ಮುಳ್ಳಿನ ಗಿಡವಾದರೂ ಅದನ್ನು ಗಟ್ಟಿಯಾಗಿ ಹಿಡಿಯಬೇಕಂತೆ! ಹಾಗೆ ಈ ಸಂಕ

ಟದ ಸಮಯದಲ್ಲಿ ಸರಳೆ ಸುಧಾಕರನ ಕುರಿತು ಚಿಂತಿಸತೊಡಗಿದಳು. ಸುಧಾಕರ ಈಗ ಎಲ್ಲಿರಬಹುದು?

ಯಾರಿಗೆ ಗೊತ್ತು? ಸರಳೆ ಆತನನ್ನು ಈ ಒಂದು ತಿಂಗಳಿಂದ ಮರೆತಿದ್ದಳು! ಸುಧಾಕರನ ಇರವನ್ನು ಅರಿಯುವ ಕುತೂಹಲ ಹೆಚ್ಚಾದಂತೆ ಸರಳೆ ತಟ್ಟನೆ ಮೇಲೆದ್ದಳು.

"ರಮೇಶ ವಿಷಸರ್ಪವೇ?" ಎಂದು ಮತ್ತೆ ಆಲೋಚಿಸಿದಳು.

"ಅಲ್ಲವೇ? ಇಲ್ಲವಾದರೆ, ತನಗೆ ವಿವಾಹವಾದ ಸುದ್ದಿಯನ್ನು ನನಗೆ ತಿಳಿಯಗೊಡದೇ ಇರುತ್ತಿದ್ದನೇ?"

ಸರಳೆಯ ಕಣ್ಣು ತೆರೆದಂತೆ ಸುಧಾಕರನ ವಿಶುದ್ಧ ಅಂತರಂಗ, ಆತನ ಪ್ರೇಮ, ಆಕೆಯ ಕಣ್ಣಿಗೆ ಕಟ್ಟಿದುವು. ಆಕೆ ಅಲ್ಲಿ ಇರಲಾರದೆ ಹೊರಬಂದಳು. ಮಳೆ ಇನ್ನೂ ಸುರಿಯುತ್ತಿತ್ತು. ಅಂಗಳದಲ್ಲಿ ದಾಸಣ್ಣ ಒಂದು ಮುರುಕು ಗೊರಬೆಯಲ್ಲಿ ತನ್ನ ದೇಹವನ್ನು ಹುದುಗಿಸಿಕೊಂಡು ಚಳಿಯಿಂದ ಕಟಕಟ ನಡುಗುತ್ತಾ ಬರುತ್ತಿದ್ದ.

ಮನಸ್ಸು ತಡೆಯದೆ ಸರಳೆ ಕೇಳಿದಳು—"ದಾಸಣ್ಣಾ! ಆ ಸುಧಾಕರ ಈಗ ಎಲ್ಲಿದ್ದಾನೆ? ತಿಳಿದಿದೆಯೇ?"

ದಾಸಣ್ಣ ಸ್ವಲ್ಪ ಹೊತ್ತು ವಿಮೂಢನಾಗಿ ಸರಳೆಯ ಮುಖವನ್ನು ದಿಟ್ಟಿಸಿದ. ಅಶಾಂತಿ ಅಲ್ಲಿ ತಾಂಡವವಾಡುತ್ತಿತ್ತು. "ಯಾವ ಸುಧಾಕರ ಅಮ್ಮಾ?" ತಿಳಿಯಲಾರದೆ ಕೇಳಿದ ದಾಸಣ್ಣ.

"ಆತ........ಅಲ್ಲಿ ನನ್ನ ಮನೆಯಲ್ಲಿ........" ತಡವರಿಸಿದಳು ಸರಳೆ. ದಾಸಣ್ಣನಿಗೆ ಈಗ ತಿಳಿಯಿತು. ಆತ ನುಡಿದ—"ಹೋ! ಆ ಸುಧಾಕರನೇ? ಆತ ಊರು ಬಿಟ್ಟು ಒಂದು ತಿಂಗಳ ಮೇಲಾಯಿತು."

ಸರಳೆಯ ಮನಸ್ಸಿನ ಇನ್ನೊಂದು ಬದಿಗೆ ಬಿದ್ದ ಪೆಟ್ಟಿದು. ಮತ್ತೆ ಅಲ್ಲಿ ನಿಲ್ಲಲಿಲ್ಲ ಸರಳೆ. ತನ್ನ ಕೋಣೆಗೆ ಹೋಗಿ ಹಾಸಿಗೆಯಲ್ಲಿ ಬಿಕ್ಕಿ ಬಿಕ್ಕಿ ಅಳುತ್ತಿದ್ದಳು. ಸುಧಾಕರ ಆಕೆಗಾಗಿ ಊರು ಬಿಟ್ಟಿದ್ದ!

ಸರಳೆಗೆ ಬೇರೆ ಬಂಧುಗಳಾರೂ ಇರಲಿಲ್ಲ. ಆದುದರಿಂದ ಆಕೆ ಇನ್ನು ರಮೇಶನನ್ನು ಬಿಟ್ಟಿರಲಾರಳು. ರಮೇಶನೇ ಇನ್ನು ಆಕೆಗೆ ಆಧಾರ

ವೃಕ್ಷ. ಅಲ್ಲದೆ, ಆಕೆಯ ತಾಯಿ ಆಕೆಯನ್ನು ಆತನಿಗೊಪ್ಪಿಸಿರಲಿಲ್ಲವೇ? "ತಾಯಿಯ ಮಾತು ಮೀರಲಾರೆನು" ಎಂದು ಆಕೆ ಅಂದು ಸುಧಾಕರನೊಡನೆ ಆಡಿದ್ದ ಮಾತು ನೆನಪಿಗೆ ಬಂತು ಆಕೆಗೆ. ಹಾಗಿರುವಾಗ ಆಕೆ ಈಗ ಊರು ಬಿಟ್ಟ ಸುಧಾಕರನನ್ನು ಹುಡುಕಿಕೊಂಡು ಏಕಾಂಗಿಯಾಗಿ ಹೇಗೆ ಹೋಗಬಲ್ಲಳು? ಅದು ಆಕೆಯ ಅಭಿಮಾನಕ್ಕೆ ಕುಂದಲ್ಲವೇ? ಹೀಗೆ ಸರಳೆ ಏನೇನೋ ಯೋಚಿಸುತ್ತಿದ್ದಳು!

ಎಷ್ಟೋ ಸಮಯ ಕಳೆದ ಅನಂತರ ಎಲ್ಲಿಯೋ ಹೋಗಿದ್ದ ರಮೇಶ ಆಕೆಯ ಕೋಣೆಯ ಬಾಗಿಲಲ್ಲಿ ನಿಂತು ಹೇಳಿದ—"ಸರಳಾ! ನಾವು ನಾಡಿದು ಬೆಳಗ್ಗೆಯೇ ಮಂಗಳೂರಿಗೆ ಹೊರಡಬೇಕು."

ಸರಳೆಯ ಮುಖದಲ್ಲಿ ಅಶಾಂತಿ ಮೂಡಿದ್ದರೂ ಧೈರ್ಯದ ಕಿಡಿ ಪ್ರಕಾಶಗೊಂಡಿತ್ತು. ಮೊದಲ ಬಾರಿ ಹೇಳಿದ ಮಾತನ್ನು ಕೇಳಿ ಪತ್ರವನ್ನು ಓದಿ ತಿಳಿದಿದ್ದ ಅವಳು ಆಶ್ಚರ್ಯಪಡಲಿಲ್ಲ, ಅದಕ್ಕಾಗಿ ಅವಳು ಯಾವ ಪ್ರಶ್ನೆಯನ್ನೂ ಕೇಳಲಿಲ್ಲ. ಅವಳ ಅಂದಿನ ಪರಿಸ್ಥಿತಿಯನ್ನು ನೋಡಿದರೆ ಅವಳು ರಮೇಶನ ಮಾತನ್ನು ಕೇಳಿದರೂ ಕೇಳಲಿಲ್ಲವೋ ಎಂಬಂತೆ ಭಾಸವಾಗುತ್ತಿತ್ತು.

ಹಾಗೆಯೇ ಸರಳೆಯು ತನ್ನಲ್ಲಿರುವ ಭಾವನೆಯನ್ನು ಹೊರಪಡಿಸದೇ ರಮೇಶನತ್ತ ತಿರುಗಿದಳು. ಮತ್ತೆ ನೋಡಿದಳು. ಅವಳ ಭಾವನೆಯೆಲ್ಲವೂ ಚೂರುಚೂರಾದಂತೆ ಕಾಣತೊಡಗಿತು. ಆದರೂ ಅವಳು ಧೈರ್ಯದಲ್ಲಿಯೇ ಇದ್ದಳು.

ಇದನ್ನು ನೋಡಿ ರಮೇಶನಿಗೆ ಯಾವ ಪರಿಣಾಮವೂ ಉಂಟಾಗಲಿಲ್ಲ. ತಾಯಿಯ ಮರಣದ ಚಿಂತೆ ಎಂದು ಭಾವಿಸಿದನೋ ಏನೋ? ಮತ್ತೊಮ್ಮೆ ಅವಳನ್ನು ಅದನ್ನೇ ಪ್ರಶ್ನಿಸಿದ.

ಅವಳಾದರೊ ಅದಕ್ಕೆ ಸಮ್ಮತಿಯನ್ನು ಸೂಚಿಸುವಂತೆ "ಹೂಂ" ಎಂದು ಪ್ರತ್ಯುತ್ತರ ಕೊಟ್ಟಳಷ್ಟೇ ಹೊರತು ಮತ್ತೆ ಮಾತನಾಡಲಿಲ್ಲ.

೫

ರೈಲುಬಂಡಿ ಮಂಗಳೂರಿನ ಕಡೆಗೆ ವೇಗವಾಗಿ ಸಾಗುತ್ತಿತ್ತು. ಎರಡನೇ ತರಗತಿಯ ಕೋಣೆಯೊಂದರಲ್ಲಿ ಸರಳೆ ಮತ್ತು ರಮೇಶರು

ಸುಖವಾಗಿ ಕುಳಿತಿದ್ದರೂ ಅವರಿಬ್ಬರ ಮನಸ್ಸೂ ಚಿಂತೆಯ ತೆಕ್ಕೆಯಲ್ಲಿ ಸಿಲುಕಿ ವಿಚಾರದ ಸುಳಿಯಲ್ಲಿತ್ತು. ಸರಳೆಯ ಬೇಗುದಿ ಒಂದು ವಿಧವಾದರೆ, ರಮೇಶನದು ಇನ್ನೊಂದು ವಿಧ.

"ನಾನಿಂದು ಸರಳೆಯೊಡನೆ ಮಂಗಳೂರಿಗೆ ಹೋಗುತ್ತಿದ್ದೇನೆ. ಆಕೆಯನ್ನು ಮನೆಗೆ ಹೇಗೆ ತಾನೇ ಕರೆದುಕೊಂಡು ಹೋಗಲು ಸಾಧ್ಯವಾದೀತು? ಹೋಗದೆ ಇದ್ದರೆ....ಬೇರೆ ಉಪಾಯವೇನು? ಇಂದು ಆಕೆ ಅಬಲೆ, ನಿರಾಶ್ರಿತೆ, ಅವಳ ತಾಯಿಯಂತೂ ನನ್ನ ಮೇಲೆಯೇ ಅವಳ ಜವಾಬ್ದಾರಿಯನ್ನು ಬಿಟ್ಟಿದ್ದಾಳೆ. ಆಕೆಯನ್ನು ಸಲಹುವ ಭಾರ ನನ್ನದು. ಆದರೆ ಸುಮಿತ್ರೆ—ಆಕೆಯನ್ನು ನನ್ನೆಡೆಗೆ ಬರಗೊಟ್ಟಾಳೇ? ಸರಳೆಗೆ ಆಕೆ ಸ್ವಾಗತವನ್ನು ನೀಡುವಳೇ?....ನೀಡದಿದ್ದರೆ....ಮುಂದಿನ ಮಾರ್ಗವೇನು?" ಎಂದು ಚಿಂತಿಸುತ್ತಿದ್ದನು ರಮೇಶ.

"ಸರಳೆ ಮತ್ತು ನನ್ನ ಬಗೆಗೆ ಸುಮಿತ್ರೆ ಸಂಶಯಪಟ್ಟು ಇಲ್ಲದ ಕಿರುಕುಳ ತಂದೊಡ್ಡಿದರೆ? ತನ್ನ ಸಂಸಾರ ಸುಖವಿಲ್ಲದ ನರಕವಾಗಲಾರದೇ? ಸರಳೆ ನಮ್ಮಿಬ್ಬರ ಎಡೆಯಲ್ಲಿ ಬಂದು ಮನೆಯ ಶಾಂತಿಯನ್ನು ಮುರಿಯುವಂತಾಯಿತಲ್ಲ!...." ಮರುಕ್ಷಣವೇ ರಮೇಶನಿಗೆನಿಸಿತು—"ಛೇ! ಸರಳೆ ಅಂತಹ ಕೆಟ್ಟ ಗುಣದವಳೇ?—ಸರಳೆ ಒಳ್ಳೆಯ ಗುಣದವಳಿರಬಹುದು. ಆದರೆ ಸುಮಿತ್ರೆ?—ಸುಮಿತ್ರೆ ನನಗೇನೂ ಅಪರಿಚಿತಳಲ್ಲವಲ್ಲಾ! ಆಕೆಯೇ ವಿಕಲ್ಪ ನೆನೆದು ತೊಂದರೆಯನ್ನು ತಂದುಕೊಂಡರೆ ತಂದುಕೊಳ್ಳಲಿ. ನನಗೇನು? ಅದರ ಫಲ ಆಕೆಯೇ ಉಂಡಾಳು" ಎಂದು ರಮೇಶನ ಭವಿಷ್ಯ ಚಿಂತನೆ ಮುಂದುವರಿಯಿತು.

"ಕೆಟ್ಟ ಫಲ ಅವಳನ್ನು ಮಾತ್ರ ಬಾಧಿಸಿ ಸುಮ್ಮನಾಗುವುದೇ? ಇಡೀ ಸಂಸಾರದಲ್ಲಿ ಗೊಂದಲ ಹಚ್ಚುವುದು. ಇದರಿಂದಾಗಿ ಎಲ್ಲರೂ ಅಶಾಂತಿಚಿತ್ತರಾಗಿರಬೇಕಲ್ಲವೇ?"

"ಹೌದು....ಅದಕ್ಕೆ ಎದೆಯೊಡ್ಡಬೇಕು. ಅನ್ಯಾಯದ ವಿರುದ್ಧ ಹೋರಾಡಲು ನಾನೆಂದು ತಾನೇ ಹೆದರಿದ್ದೇನೆ?" ಎಂದು ಉತ್ತರಿಸಿತು.

"ಅದರಿಂದ ಸುಮಿತ್ರೆ ನಿನ್ನಿಂದ ಮತ್ತೂ ದೂರವಾಗಲಾರಳೇ?"

"ಅವಳಾಗಿ ದೂರವಾದರೆ........ಆಗಲಿ. ಅವಳಿಂದ ನನಗೆ ಸುಖ ಸಿಕ್ಕಿದುದೂ ಅಷ್ಟೆ! ಅವಳನ್ನು ನಾನು ಮೆಚ್ಚಿದುದೂ ಅಷ್ಟರಲ್ಲಿಯೇ ಇದೆ!" ನಿಷ್ಟುರವಾದ ಉತ್ತರ ಅವನ ಮನಸ್ಸು ನುಡಿಯಲು ಹಿಂಜರಿಯಲಿಲ್ಲ.

"ಸರಳೆಯಂತಹ 'ಸುರೂಪಿ' ದೊರೆತಾಗ ನಿನ್ನ ಬಾಳ್ವೆಯ ಗೆಳತಿಯನ್ನು 'ಕುರೂಪಿ'ಯೆಂದು ಬಿರುದಿಟ್ಟು ತ್ಯಾಗ ಮಾಡುವೆಯಾ?"

"ಆ ಬಾಳ್ವೆಯ ಗೆಳತಿಯನ್ನು ನಾನು 'ಸುರೂಪಿ'ಯೆಂದು ಬಿರುದಿಟ್ಟು ಮೆಚ್ಚಿದುದೂ ಅಷ್ಟರಲ್ಲಿಯೇ ಇದೆ! ನಿಜ ಹೇಳುವುದಾದರೆ— ನಾನು ಆಕೆಯನ್ನು ಒಲಿದು ವರಿಸಲೇ ಇಲ್ಲ. ಎಲ್ಲಾ ತಂದೆಯ ಒತ್ತಾಯಕ್ಕೆ ಒಪ್ಪಿದೆ ಅಷ್ಟೆ."

"ಹಾಗಾದರೆ ನೀನಿನ್ನೇನು ಮಾಡುವವನು?" ಎಂದು ರಮೇಶನ ವಿವೇಕ ಅವನ ಸ್ವಾರ್ಥ ಮನೋಭಾವವನ್ನು ಚುಚ್ಚಿ ನುಡಿಯಿತು.

"ಹೌದು! ನಾನೇನು ಮಾಡುವವನು? ಇನ್ನು.......?" ರಮೇಶ ತನ್ನನ್ನು ತಾನೇ ಪ್ರಶ್ನಿಸಿಕೊಂಡ. ಆ ಪ್ರಶ್ನೆಗೆ ಉತ್ತರ ಕೊಡಲು ರಮೇಶ ಸ್ವಲ್ಪ ತಡವರಿಸಬೇಕಾಯಿತು.

"ಮೊದಲು........ಮೊದಲಂತೂ ಸರಳೆಯನ್ನು ನನ್ನೊಡನೆ ಮನೆಗೆ ಕರೆದುಕೊಂಡು ಹೋಗುತ್ತೇನೆ....ಮುಂದೆ" ರಮೇಶ ಹೀಗೆ ಯೋಚಿಸುತ್ತಾ ಸರಳೆಯ ಕಡೆಗೆ ದೃಷ್ಟಿ ಬೀರಿದನು. ಮನಸ್ಸು ಉದ್ವೇಗಗೊಂಡಿತು. ತನ್ನ ಪರಿಸ್ಥಿತಿಯರಿತು ತಲೆಯು ನಾನಾ ಕಡೆಗೆ ಓಡತೊಡಗಿತು., ಅದರ ಜೊತೆಯಲ್ಲಿಯೇ ರೈಲುಬಂಡಿಯೂ ಓಡುತ್ತಿತ್ತು.

"ಇಷ್ಟು ತೊಂದರೆಗೂ ಕಾರಣಳು ಈ ಸರಳೆಯಲ್ಲವೇ?" ಎಂದು ಪುನಃ ಅವನ ವಿವೇಕ ಪ್ರಶ್ನಿಸಿತು. ಉತ್ತರ ಕೊಡಲು ಸಾಧ್ಯವಾಗದೆ ಅವನ ಸ್ವಭಾವ ಹಿಂಜರಿಯಿತು.

"ಸರಳೆಯೇ? ಹೇಗಾದಾಳು? ನಿನ್ನ ತಪ್ಪೇ ಇರಬೇಕು. ನೀನೇಕೆ ಆಕೆಯನ್ನು ಅನ್ಯದೃಷ್ಟಿಯಿಂದ ನೋಡಬೇಕು? ತಂಗಿಯೆಂದು ಭಾವಿಸು. ಹಾಗೆಯೇ ತಂಗಿಯೆಂದೇ ಸುಮಿತ್ರೆಗೂ ಆಕೆಯ ಪರಿಚಯ ಮಾಡಿಕೊಡು. ಅಂದರೆ ಸುಮಿತ್ರೆ ಸರಳೆಗೆ ಆಶ್ರಯ ಕೊಡಲು ಯಾಕೆ ಹಿಂಜರಿಯುವಳು?

ಆಕೆಯೂ ಹೆಣ್ಣಲ್ಲವೇ? ಹೆಣ್ಣರುಳು ಆಕೆಗೂ ಇಲ್ಲವೇ?" ಈ ಗೊಂದಲ ದಲ್ಲಿ ಸಿಲುಕದೆ ಇಷ್ಟು ಹೊತ್ತು ಸುಮ್ಮನೆ ಕುಳಿತ ರಮೇಶನ ಅಂತರಾತ್ಮ ತನ್ನ ತೀರ್ಪನ್ನು ಓದಿತು.

"ಸಾಧ್ಯವೇ ಅದು?"

"ಯಾಕೆ ಸಾಧ್ಯವಿಲ್ಲ?"

"ಹೌದು, ಯಾಕೆ ಸಾಧ್ಯವಿಲ್ಲ?" ಈ ಪ್ರಶ್ನೆ ರಮೇಶನ ರಕ್ತದೊಡನೆ ವೇಗದಿಂದ ಆತನ ದೇಹವಿಡೀ ಸಂಚರಿಸಿತು. ರಮೇಶ ಬೆಪ್ಪಾದ.

"ಸಾಧ್ಯವಿಲ್ಲವೆ? ಯಾಕೆ ಇಲ್ಲ? ಇರಬಹುದು....ಅಥವಾ ಇಲ್ಲ ದೆಯೂ........" ಎಂದು ರಮೇಶ ಯೋಚಿಸುತ್ತಲೇ ಸರಳೆಯತ್ತ ನೋಡಿದ. ಸರಳೆ ಕಿಟಿಕಿಯು ಬದಿಯಲ್ಲಿ ಕುಳಿತು ಬಲಗೈಯನ್ನು ಕಿಟಿಕಿಗೆ ಊರಿ ಅದರ ಮೇಲೆ ತನ್ನ ಮುಖವಿರಿಸಿ ಯೋಚನಾಮುದ್ರೆಯಿಂದ ಕುಳಿ ತಿದ್ದಳು. ಆಕೆಯ ಎಡದಕೈ ಆಕೆಯ ತೊಡೆಯ ಮೇಲೆ ನಿರ್ಜೀವಿಯಂತೆ ಒರಗಿತ್ತು. ಅರಿವಿಲ್ಲದವಳಂತೆ ಅಲುಗಾಡದೆ ಕುಳಿತಿದ್ದಳು ಸರಳೆ....... ಆಕೆಯ ಕಣ್ಣುಗಳಿಂದ ಕಣ್ಣೀರು ಧಾರಾಕಾರವಾಗಿ ತೊಟ್ಟಿಕ್ಕುತ್ತಿದ್ದುದೂ ಆಕೆಗೆ ತಿಳಿದಿರಲಿಲ್ಲ!

ಸರಳೆಯ ಕಂಬನಿ ನೋಡಿ ರಮೇಶನ ಯೋಚನಾಸರಣಿ ಕಡಿ ಯಿತು. ಮನಸ್ಸಿನಲ್ಲಿ ಅವಳ ಪರಿಸ್ಥಿತಿಯನ್ನು ಕಂಡು ದುಃಖವಾಗ ತೊಡಗಿತು. ಅವಳ ದುಃಖವನ್ನು ಕಡಿಮೆ ಮಾಡಬೇಕೆಂಬ ಧ್ವನಿ ಪ್ರತಿಧ್ವನಿ ಸುತ್ತಿತ್ತು. ಅವಳ ದುಃಖದ ಬಗೆಗೆ ಕಾರಣವನ್ನು ಕೇಳಿ ಅವಳನ್ನು ಸಮಾ ಧಾನಪಡಿಸುವುದು ತನ್ನ ಕರ್ತವ್ಯವೆಂದರಿತುಕೊಂಡನು. ಅಂತೂ ಕಾತರ ದಿಂದ ರಮೇಶ ಕೇಳಿದನು—"ಸರಳಾ! ಅಳುತ್ತಿರುವೆಯಾ?"

ಯೋಚನಾಮಗ್ನಳಾದ ಸರಳೆಗೆ ಆ ಮಾತು ಕೇಳಿಸಲೇ ಇಲ್ಲ! ಸರಳೆಯನ್ನು ಎಚ್ಚರಿಸಲು ಮತ್ತೊಮ್ಮೆ ಕೇಳಿದ. ಎಲ್ಲಿಯೋ ಯೋಚಿ ಸುತ್ತಿದ್ದ ಸರಳೆ ತತ್‌ಕ್ಷಣ ತಿರುಗಿದಳು. ಆಗ ಅವಳ ಭುಜವು ಸಮೀಪ ದಲ್ಲಿದ್ದ ರಮೇಶನಿಗೆ ಸ್ಪರ್ಶಿಸಿತು. ಆ ಸ್ಪರ್ಶದಲ್ಲಿ ಏನೋ ಹೊಸ ತರದ ಅನುಭವವಾಯಿತು ಇಬ್ಬರಿಗೂ.

ಸರಳೆ ಎಚ್ಚತ್ತು ಕೇಳಿದಳು ಗಾಬರಿಯಿಂದ "ಏನು ರಮೇಶ?"

"ಅಳುತ್ತಿರುವೆಯಾ ಸರಳಾ?" ಪುನಃ ಕೇಳಿದನು ರಮೇಶ.

"ಇಲ್ಲ" ಎನ್ನುತ್ತಾ ತನ್ನ ಕೆನ್ನೆಯನ್ನು ತಡವಿ ನೋಡಿಕೊಂಡಳು ಸರಳೆ—ನಿಜವಾಗಿಯೂ ಕೆನ್ನೆ ಒದ್ದೆಯಾಗಿತ್ತು. ಆಕೆಗೆ ತಿಳಿಯದಂತೆ ಆಕೆಯ ಕಣ್ಣುಗಳು ಕಂಬನಿ ಮಿಡಿಯುತ್ತಿದ್ದುವು.

"ಸುಳ್ಳು ಹೇಳುವೆಯಾ?—ನೋಡು."

"ಹೌದು. ಇದ್ದಲಿನ ಚೂರು ಕಣ್ಣಿಗೆ ಬಿದ್ದು ಕಣ್ಣೀರು ಬಂತು ಅಷ್ಟೆ!" ಎಂದು ನಿಜವಾದ ಕಾರಣವನ್ನು ಮರೆಸಿ, ನಗುವ ಪ್ರಯತ್ನ ಮಾಡುತ್ತಾ ಹೇಳಿದಳು ಸರಳೆ.

ರಮೇಶ ಸಹಾನುಭೂತಿ ತೋರಿಸುತ್ತಾ ನುಡಿದನು: "ಈ ರೈಲ್ವೆಯ ಪ್ರಯಾಣವೆಂದರೆ ಹಾಗೆಯೇ ಸರಳಾ! ಬಹಳ ಕಷ್ಟ. ಅದರಲ್ಲಿ ನಿನ ಗಂತೂ—ನೀನು ಈ ಮೊದಲು ರೈಲಿನಲ್ಲಿ ಪ್ರಯಾಣ ಮಾಡಿಲ್ಲ ತಾನೇ?"

"ನಾನು ಎಲ್ಲಿ ರೈಲುಪ್ರಯಾಣ ಮಾಡುತ್ತೇನೆ? ಆದರೆ, ಸಣ್ಣವ ಳಾಗಿದ್ದಾಗ ತಾಯಿಯೊಡನೆ ಒಮ್ಮೆ ಮದ್ರಾಸ್ ವರೆಗೆ ಹೋಗಿದ್ದೆ." ನಿರುತ್ಸಾಹದಿಂದ ಮಾತನ್ನು ಮುಗಿಸುವ ಸ್ವರದಲ್ಲಿ ನುಡಿದು ಸರಳೆ ಕಿಟಿಕಿಯಿಂದ ಹೊರಗೆ ಮುಖ ಚಾಚಿ ವೇಗದಿಂದ ಹಿಂದೆ ಹಿಂದೆ ಓಡು ತ್ತಿದ್ದ ಪ್ರಕೃತಿ ಸೌಂದರ್ಯವನ್ನು ನೋಡುವುದರಲ್ಲಿ ತಲ್ಲೀನಳಾದಳು. ಅವಳ ಚಿಂತಾಪೀಡಿತ ಅಂತರಂಗಕ್ಕೆ ಪ್ರಕೃತಿ ನಿರೀಕ್ಷಣೆ ಸ್ವಲ್ಪ ಆಹ್ಲಾದ ವನ್ನು ಕೊಟ್ಟಿತು.

"ಹಾಗೆ ಮುಖ ಹೊರಗೆ ಹಾಕಬೇಡ ಸರಳಾ. ಇದ್ದಲಿನ ಕಣ ಗಳು ಇನ್ನೂ ಕಣ್ಣಿಗೆ ಕಿವಿಗೆ ಬಿದ್ದಾವು" ಎಂದು ಆಕೆಗೆ ಜಾಗ್ರತೆ ಹೇಳಿ ದನು ರಮೇಶ. ಆಕೆಯನ್ನು ಆಕೆಯಷ್ಟಕ್ಕೇ ಬಿಟ್ಟರೆ ಚಿಂತೆಯಿಂದ ಕೊರಗುವಳೆಂದು ತಿಳಿದು, ಮಾತಿಗೆಳೆಯುವ ಪ್ರಯತ್ನ ಮಾಡಿದನು.

ಸರಳಾ ಮುಖ ಒಳಗೆ ಎಳೆದುಕೊಂಡಳು. ಆದರೂ ಆಕೆಯ ಕಣ್ಣು ಕಿಟಿಕಿಯಿಂದ ಹೊರಗೇ ಸುಳಿಯುತ್ತಿತ್ತು. ಎಂತಹ ನೋಟ! "ಪ್ರಯಾಣ ಈಗ ಮುಗಿದೀತು. ಆದುದರಿಂದ ಈ ಪ್ರಕೃತಿ ದರ್ಶನದ

ಆನಂದ ಎಲ್ಲಿ ನಿಂತುಬಿಡುವುದೋ ಎಂದು ಕಳವಳವಾಯಿತು ಆಕೆಗೆ. ಆದುದರಿಂದ ಆಕೆ ರಮೇಶನನ್ನು ಕೇಳಿದಳು: "ಇನ್ನೆಷ್ಟು ಹೊತ್ತು ಇದೆ ಈ ಪ್ರಯಾಣ?"

ಆಕೆಯ ಮಾತಿಗೆ ರಮೇಶ ಇನ್ನೊಂದು ಅರ್ಥಮಾಡಿಕೊಂಡನು. "ಏನು? ಪ್ರಯಾಣ ಬೇಸರವಾಯಿತೇ? ಇನ್ನು ಹೆಚ್ಚು ಹೊತ್ತು ಇಲ್ಲ. ಈಗಲೇ ಬರುತ್ತದೆ ಮಂಗಳೂರು. ಆಕೆ ಸ್ಟೇಷನ್ನಿಗೆ ಕಾರು ತಂದಿರ ಬಹುದು. ಇನ್ನು ಕಾಲು ಗಂಟೆಯೊಳಗೆ ಮನೆ ಸೇರಿಯೇ ಬಿಡುತ್ತೇವೆ."

ಸರಳೆಗೆ ಆಶ್ಚರ್ಯವಾಯಿತು.—"ಆಕೆಯೆಂದರೆ ಯಾರು?" ಕೇಳಿ ದಳು ಆಕೆ.

ರಮೇಶ ಕ್ಷಣ ಹೊತ್ತು ಸ್ತಬ್ಧನಾದ. ಅನಂತರ ಹೇಳಿದ—"ನಿನಗೆ ತಿಳಿಯದೇ? ಆಕೆಯೆಂದರೆ ನನ್ನ ಪತ್ನಿ-ಸುಮಿತ್ರೆ."

ಸರಳೆಗೆ ತಿಳಿಯಬೇಕಾದುದು ತಿಳಿಯಿತು—ಹಾಗಾದರೆ ರಮೇಶ ವಿವಾಹಿತ! ಅದರಲ್ಲಿ ಸಂಶಯವಿಲ್ಲ!

ಸರಳೆಯ ಮುಖ ಬಿಳುಪೇರಿತು. ನಡುಗುವ ತುಟಿಯಿಂದ ನುಡಿ ದಳು: "ಹಾಗಾದರೆ ನೀವು ವಿವಾಹಿತರು!"

"ನಿನಗೆ ತಿಳಿಯದೇ?" ಪೆಚ್ಚುಗಟ್ಟಿದ ರಮೇಶ ಕೇಳಿದ.

"ನೀನು ಎಂದಾದರೂ ನನಗೊಬ್ಬಳು ಅತ್ತಿಗೆ ಇರುವಳೆಂದು ತಿಳಿ ಸಿರುವೆಯಾ, ರಮೇಶಣ್ಣಾ?"

ರಮೇಶ ಏನೋ ಉತ್ತರ ಕೊಡಲು ಹವಣಿಸಿದನು. ಆದರೆ ಅವನ ಬಾಯಿಯಿಂದ ಮಾತು ಹೊರಡಲಿಲ್ಲ.

೬

ಹೊಗೆಬಂಡಿಯ ವೇಗ ಕಮ್ಮಿಯಾಗುತ್ತಾ ಬಂದಿತು. ದೂರದಲ್ಲಿ ಮಂಗಳೂರಿನ ನಿಲ್ದಾಣ ಕಾಣಬಂತು ಎನ್ನುವಷ್ಟರಲ್ಲಿಯೇ ಪ್ಲೇಟ್ ಫಾರ್ಮಿನ ಪಕ್ಕದಲ್ಲಿಯೇ ನಿಂತುಕೊಂಡಿತು. ನಿಂತುಕೊಳ್ಳುವ ಮೊದಲೇ ಬಾಗಿಲು ತೆರೆದು ಜನರು ಕೆಳಗೆ ಹಾರತೊಡಗಿದರು. ತಮ್ಮ ಬಂಧು

ಮಿತ್ರರನ್ನು ಕಾಣ ಬಂದವರು, ಹೊಟ್ಟೆ ಪಾಡಿಗಾಗಿ ಹೊರೆ ಹೊರು
ಹಮಾಲರು, ಜಟಕಾ ಬಂಡಿಗಳನ್ನು ಹೊಡೆಯುವವರು,— ಇನ್ನೂ ಎಷ್ಟೊ
ವಿಧದ ಜನರಿಂದ ರೈಲ್ವೆನಿಲ್ದಾಣ ತುಂಬಿ ತುಳುಕಿತ್ತು.

ರೈಲುಬಂಡಿ ನಿಲ್ಲುವ ಮೊದಲೇ ರಮೇಶ ಕಿಟಕಿಯಿಂದ ಮುಖ
ಹೊರಗಿಕ್ಕಿ ಜನರ ಮಧ್ಯದಲ್ಲಿ ತನ್ನನ್ನು ಸ್ವಾಗತಿಸಲು ಬಂದಿರಬಹುದಾ
ಸುಮಿತ್ರೆಯನ್ನು ಹುಡುಕತೊಡಗಿದ-ಆದರೆ, ಆ ಜನಜಂಗುಳಿಯಲ್ಲಿ ಸುಮಿ
ತ್ರೆಯ ಮುಖ ರಮೇಶನ ದೃಷ್ಟಿಗೆ ಬೀಳಲಿಲ್ಲ. ಸುಮಿತ್ರೆ ಬರಲಿಲ್ಲವೆಂದ
ಭಾವಿಸಿದ ರಮೇಶನ ಎದೆಯಲ್ಲಿ ಏನೋ ಕಳವಳವಾಯಿತು. ಸರ
ಯನ್ನು ಕರೆದನು ಹೇಳಿದನು:—"ಸರಳಾ! ಆಕೆ ಬರಲಿಲ್ಲವೆಂದು ತೋರ
ತ್ತದೆ."

"ನಾವಿಂದು ಬರುತ್ತೇವೆಂದು ಆಕೆಗೆ ಗೊತ್ತೇ?" ಹೆಚ್ಚೇನೂ ಕುತ
ಹಲ ತೋರಿಸದೆ ಕೇಳಿದಳು ಸರಳೆ.

"ಗೊತ್ತಿಲ್ಲದೆ ಏನು? ತಂತೀವಾರ್ತೆ ಕೊಟ್ಟಿರುವೆ."

"ಹೂಂ" ಎಂದು ಸರಳೆ ಹೊರಗಿನ ಜನಸಾಗರವನ್ನು ದೃಷ್ಟಿಸುವು
ರಲ್ಲಿ ತನ್ಮಯಳಾದಳು.

"ಆಕೆಗೇನಾದರೂ ಕಾಯಿಲೆ ಕಸಾರೆಯಾಗಿ....ಬರದಿರಬಹುದೇ?
ರಮೇಶ ತನ್ನ ಸಂಶಯವನ್ನು ಹೊರಗೆಡವಿದನು.

ಸರಳೆ ರಮೇಶನ ಮಾತಿಗೆ ಗಮನಕೊಟ್ಟಿರಲಿಲ್ಲ. ಆದುದರಿಂ
ಮತ್ತು "ಹೂಂ" ಎಂದಳು. ಅಂತೂ ರಮೇಶನಿಗೆ ಆಶ್ಚರ್ಯವಾಯಿತು
ಸರಳೆಯ ಈ ಹೂಂ ಗುಟ್ಟುವಿಕೆ?

ರೈಲಿನಿಂದ ಇಳಿದು ಎಲ್ಲರೂ ಹೊರಗೆ ಹೋಗುವುದಕ್ಕಾಗಿ "ಕ್ಯೂ
ನಿಂತಿದ್ದರು. ಕೆಲವರು ತಮ್ಮ ಗಂಟು ಗದಡಿ ಎತ್ತಿಕೊಳ್ಳುವ ಹಮಾ
ರೊಡನೆ ಕೂಲಿಗಾಗಿ ಚೌಕಾಶಿ ಮಾಡುತ್ತಿದ್ದರು. ಅಂತೂ ಸ್ಟೇಷನ
ಒಂದು ಚಟುವಟಿಕೆಯ ಕೇಂದ್ರವೇ ಆದಂತಿತ್ತು.

"ಸುಮಿತ್ರೆಯೂ ಇಲ್ಲ; ಡ್ರೈವರನೂ ಇಲ್ಲ," ಎಂದು ರಮೇ
ತನ್ನ ಟ್ರಂಕ್ ಎತ್ತಿಕೊಂಡು ರೈಲಿನಿಂದ ಕೆಳಗಿಳಿದು ಬೇಕೆನ್ನುವಷ್ಟರಲ್ಲಿ

ಡ್ರೈವರನು ಓಡುತ್ತಾ ಬಂದು ರಮೇಶನ ಸಾಮಾನುಗಳನ್ನು ಎತ್ತಿ ಕೆಳಗಿಳಿಸತೊಡಗಿದನು. ರಮೇಶನಿಗೆ ಆಚ್ಚರಿಯಾಗಿ "ಎಲಾ! ಇಷ್ಟು ಹೊತ್ತಿನಲ್ಲಿ ನೀನೆಲ್ಲಿಂದ ಬಂದೆ?" ಎಂದು ಕೇಳಿದನು.

"ಬರುವಾಗ ಸ್ವಲ್ಪ ಲೇಟಾಯ್ತು ಸ್ವಾಮಿ! ಡಾಕ್ಟರರನ್ನು ಮನೆಗೆ ಬಿಟ್ಟು ಬರಲಿಕ್ಕಿತ್ತು" ಎಂದನು ಡ್ರೈವರ್.

"ಡಾಕ್ಟರ್?" ಮತ್ತೂ ಆಚ್ಚರಿಯಾಯಿತು ರಮೇಶನಿಗೆ.

"ಅಮ್ಮಾವ್ರಿಗೆ ಔಷಧಕ್ಕೆ....ಡಾಕ್ಟರ್."

"ಅಮ್ಮಾವ್ರಿಗೆ!"

"ಹೌದು ಸ್ವಾಮಿ? ಅಮ್ಮಾವ್ರಿಗೆ ಜ್ವರ ಬಂದಿತ್ತು."

"ಯಾವಾಗ ಬಂತು? ಈಗ ಹೇಗಿದೆ?" ಕಳವಳದಿಂದ ರಮೇಶ ಕೇಳಿದನು.

"ನಿನ್ನೆ ರಾತ್ರೆ. ಈವತ್ತು ಬೆಳಿಗ್ಗೆ ಡಾಕ್ಟರರನ್ನು ಕರೆದುಕೊಂಡು ಬರಲಿಕ್ಕೆ ಹೇಳಿದ್ದರು. ಏನೂ ಭಯವಿಲ್ಲ ಎಂದಿದ್ದಾರೆ ಡಾಕ್ಟರು" ಎಂದ ಡ್ರೈವರ್.

ರಮೇಶನ ಹೃದಯದಲ್ಲಿ ವಿಲಕ್ಷಣ ವೇದನೆಯಾಗುತ್ತಿತ್ತು. "ಹೂಂ.... ಸಾಮಾನೆಲ್ಲಾ ಬೇಗ ಬೇಗ ಎತ್ತಿ ಇಡಲು ಕೂಲಿಯನ್ನು ಕರೆ. ಕಾರಿನಲ್ಲಿ ಬೇಗ ಮನೆ ಸೇರಬೇಕು........" ಎಂದು ಅಪ್ಪಣೆಕೊಟ್ಟನು.

ಡ್ರೈವರ್ ಅಪ್ಪಣೆಯನ್ನು ಪಾಲಿಸಲು ಅತ್ತ ನಡೆದ. ಅನಂತರ ರಮೇಶ ಸರಳೆಗೆ ಬಳಿಯಲ್ಲಿ ನಿಂತಿದ್ದ ಕಾರನ್ನು ತೋರಿಸುತ್ತಾ ಹೇಳಿದನು. "ಹೋಗು ಸರಳಾ! ಕಾರಿನಲ್ಲಿ ಕುಳಿತುಕೋ! ಈ ಸಾಮಾನುಗಳನ್ನೆಲ್ಲಾ ತೆಗೆಯಿಸಿಕೊಂಡು ನಾನೂ ಈಗ ಬರುತ್ತೇನೆ."

ಸರಳೆ ಅನುಮಾನಿಸುತ್ತಾ ಕಾರಿನಲ್ಲಿ ಹಿಂದಿನ ಸೀಟಿನಲ್ಲಿ ಹೋಗಿ ಕುಳಿತುಕೊಂಡಳು.

ಡ್ರೈವರ್ ಕೂಲಿಗಳನ್ನು ರಮೇಶನ ಬಳಿಗೆ ಕಳುಹಿಸಿ ತಾನು ಕಾರಿನ ಬಳಿಗೆ ಬಂದನು. ಕಾರಿನ ಒಳಗೆ ಕುಳಿತುಕೊಂಡು ಒಮ್ಮೆ ಕುಶಾಲಿಗಾಗಿ "ಹೋರ್ನ್" ಬಾರಿಸಿದನು. ಅನಂತರ ತಿರುಗಿ ನೋಡಿದನೊಮ್ಮೆ

ಯಾರೋ ಹೆಂಗಸು ಕಾರಿನಲ್ಲಿ ಕುಳಿತುಕೊಂಡಿದ್ದಾಳೆಂದು ಆಗ ಅವ
ನಿಗೆ ತಿಳಿಯಿತು. ಯಾರಾದರೂ ಬಾಡಿಗೆಯ ಕಾರೆಂದು ತಪ್ಪಿ ಬಂದು
ಕುಳಿತಿರಬಹುದೆಂಬ ಯೋಚನೆಯಾಯಿತು ಅವನಿಗೆ. "ಒಳ್ಳೆ ಸಂದರ್ಭ
ಸಿಕ್ಕಿತು. ಈ ಹೆಂಗಸನ್ನು ತಮಾಷೆ ಮಾಡಬೇಕು" ಎಂದು ನೆನೆದು
ಡ್ರೈವರ್ ವ್ಯಂಗ್ಯವಾಗಿ ಹೇಳಿದ—"ಇದು ಬಾಡಿಗೆಯ ಕಾರು ಅಲ್ಲಮ್ಮಾ—
ಸಿಕ್ಕಿಸಿಕ್ಕಿದವರು ಬಂದು ಕುಳಿತುಕೊಳ್ಳಲು. ಇದು ನನ್ನ ಧನಿಯ ಸ್ವಂತ
ಕಾರು."

ಸರಳೆಯ ಮರ್ಮಕ್ಕೆ ಹೊಡೆದಂತಾಯಿತು ಆ ಮಾತು. "ಓಹೋ!
ನಿನ್ನ ಧನಿಯ ಕಾರೇ? ತಿಳಿಯಲಿಲ್ಲ!" ಎನ್ನುತ್ತಾ ಸರಳೆ ಕೆಳಗಿಳಿದು
ಬಿಟ್ಟಳು. ತಾನು ಒಳ್ಳೆಯ ಮೋಜು ಮಾಡಿದೆನೆಂಬ ಹೆಮ್ಮೆಯಿಂದ
ಡ್ರೈವರ್ ತನ್ನ ದಪ್ಪ ಮೀಸೆಯ ಮೇಲೊಮ್ಮೆ ಬಲಗೈ ಆಡಿಸಿದನು.

ರಮೇಶ ಬಂದು ತಮ್ಮ ಸಾಮಾನುಗಳನ್ನೆಲ್ಲಾ ಕಾರಿನೊಳಗೆ
ಹಾಕಿಸಿ, ಕೂಲಿಗಳಿಗೆ ಕೂಲಿಕೊಟ್ಟು ಕಳುಹಿಸಿದನು. ಆಗಲೇ ಅವನಿಗೆ
ಕಂಡುದು ಸರಳೆ ದೂರದಲ್ಲಿ ನಿಂತಿದ್ದುದು. "ಯಾಕೆ ಸರಳಾ ನಿಂತು
ಬಿಟ್ಟೆ. ಬಾ ಕುಳಿತುಕೋ!" ಎನ್ನುತ್ತಾ ಕಾರಿನ ಬಾಗಿಲನ್ನು ತೆಗೆದು
ಕೊಟ್ಟನು. ಸರಳೆ ಮಾತನಾಡದೆ ತಲೆತಗ್ಗಿಸಿಕೊಂಡು ಕಾರನ್ನೇರಿ ಕುಳಿ
ತಳು.

ಡ್ರೈವರನ ನೆತ್ತಿಗೇರಿದ್ದ ಪಿತ್ತ ಅರೆಕ್ಷಣದಲ್ಲಿ ಇಳಿದು ಬಿಟ್ಟಿತು. ಆಕೆ
ರಮೇಶನೊಡನೆ ಬಂದವಳಾಗಿರಬಹುದೆಂದು ಅವನ ಮನಸ್ಸಿಗೆ ಒಮ್ಮೆಯೂ
ಗೋಚರಿಸಿರಲಿಲ್ಲ. ರಮೇಶನಿಗೆ ಅಕ್ಕತಂಗಿಯರಾಗಲೀ ದೂರದ ಸಂಬಂ
ಧಿಕರಾಗಲೀ ಇಲ್ಲವೆಂದು ಅವನು ಎಂದೋ ಕೇಳಿ ತಿಳಿದಿದ್ದ. ಹಾಗಾದರೆ
ಇವಳಾರು? ಎಂದು ಯೋಚನೆ ಮಾಡುವುದರಲ್ಲಿ ತಲ್ಲೀನನಾಗಿದ್ದ.

ರಮೇಶನು ಕಾರು ಹತ್ತಿ ಕುಳಿತೊಡನೆಯೇ ತಡ ಮಾಡದೆ ಕಾರು
ಹೊರಟಿತು. ಯಾವಾಗಲೂ ಕಾರು ಬಿಡುತ್ತಲೇ ಹರಟುತ್ತಿದ್ದ ಡ್ರೈವ
ರನ ಬಾಯಿಗೆ ಇಂದು ಬೀಗ ಬಿದ್ದಿತ್ತು. ಸರಳೆಗೆ ತಾನು ಅಪಮಾನ
ಮಾಡಿದುದನ್ನು ಎಲ್ಲಿ ಆಕೆ ರಮೇಶನೊಡನೆ ಹೇಳಿ ತನಗೇನು ಕಷ್ಟ ಕೊಡಿ
ಸುವಳೋ ಎಂಬ ಚಿಂತೆ ಅವನನ್ನು ಕಾಡುತ್ತಿತ್ತು.

ಕಾರು ಜೋರಾಗಿ ಓಡುತ್ತಿತ್ತು. ಅದರ ನಾಲ್ಕೂ ಚಕ್ರಗಳು ಗರ್ರನೆ ತಿರುಗುವಂತೆ ಅದರಲ್ಲಿ ಕುಳಿತ ರಮೇಶ ಸರಳೆಯರ ತಲೆಯಲ್ಲಿಯೂ ಅನೇಕ ವಿಷಯಗಳು ಒಂದೇಸವನೆ ತಿರುಗುತ್ತಿದ್ದುವು.

ಸರಳೆ ಯೋಚಿಸುತ್ತಿದ್ದಳು-"ಮಂಗಳೂರಿಗೆ ಕಾಲಿಟ್ಟಾಗಲೇ ರಮೇಶನ ಕಾರಿನ ಡ್ರೈವರಿನಿಂದ ನಾನು ಅಪಮಾನಿತಳಾಗಬೇಕಾಯಿತು. ಇನ್ನೂ ನನಗೆ ಎಷ್ಟು ಸಂಕಟಗಳು ಕಾದಿವೆಯೋ? ರಮೇಶನ ಗೃಹಿಣಿ ತನ್ನನ್ನು ಸರಿಯಾಗಿ ಸ್ವಾಗತಿಸಿದರಾಯಿತು. ಇಲ್ಲವಾದರೆ?....ಇಲ್ಲವಾದರೆ........ನಾನು ಆ ಮನೆಯಲ್ಲಿ ಹೇಗೆ ಬಾಳಬಹುದು? ಅದೂ ಅವರ ಆಶ್ರಿತೆಯಾಗಿ........"

'ಆಶ್ರಿತೆ' ಎಂಬ ಶಬ್ದವಂತೂ ಸರಳೆಗೆ ರೋಷವನ್ನುಂಟುಮಾಡುತ್ತಿತ್ತು. ತಾನು ಇನ್ನೊಬ್ಬರ ಕೂಳಿಗೆ ಕೈಯೊಡ್ಡಿ ಅವರ ಆಶ್ರಿತೆಯಾಗಿ ತನ್ನ ಇಡೀ ಜೀವನವನ್ನು ಕಳೆಯಬೇಕೇ? ತಾನೂ ಇತರರಂತೆ ಸ್ವತಂತ್ರಳಾಗಿರಲಾರೆನೇ? ತಾನೂ ಒಂದು ಸ್ವತಂತ್ರ ಉದ್ಯೋಗ ನೋಡಿಕೊಂಡರೆ? ........ಉದ್ಯೋಗ—ಆಕೆಗೆ ಯಾವ ಉದ್ಯೋಗ ಸಿಕ್ಕೀತು? ಆಕೆ ಚಿಕ್ಕಂದಿನಲ್ಲಿ ಸುಧಾಕರ, ರಮೇಶರೊಡನೆ ಎಂಟನೇ ಇಯತ್ತೆಯ ವರೆಗೆ ಕಲಿತುದೆಷ್ಟೋ ಅಷ್ಟು—ಆ ಬಳಿಕ ಆಕೆ ಕಲಿತಿರಲಿಲ್ಲ. ಹಾಗಿರುವಾಗ ಆಕೆಗೆ ಯಾವ ಉದ್ಯೋಗ ಸಿಕ್ಕೀತು? ಸರಳೆಯ ಯೋಚನೆ ಬಗೆಹರಿಯಲಿಲ್ಲ.

"ಸುಮಿತ್ರೆ ನನ್ನನ್ನು ತಂಗಿಯೆಂದು ಪ್ರೀತಿಯಿಂದ ನೋಡಿಕೊಂಡರೆ ನಾನು ರಮೇಶನ ಮನೆಯಲ್ಲಿ ಬಾಳಬಹುದು. ಅಥವಾ ಆಕೆ ನನ್ನ—ಹಾಗೂ ರಮೇಶನ ಬಗೆಗೆ ಅಪಾರ್ಥ ಕಲ್ಪಿಸಿ ನನ್ನನ್ನು ಆಕೆಯ ಪ್ರತಿಸ್ಪರ್ಧಿಯೆಂದು ತಿಳಿದರೆ....ಆಗ ಮನೆ ಮಸಣದಂತಾದೀತು........"

"ಪ್ರತಿಸ್ಪರ್ಧಿ!" ಸರಳೆಯ ಮೈ ಜುಮ್ಮೆಂದಿತು. "ನಾನು ರಮೇಶನ ಪತ್ನಿಯ ಪ್ರತಿಸ್ಪರ್ಧಿ! ಹಾಗೆ ಆಗುವ ಕಾಲ ಬಂದೀತೇ?" ಯಾವ ಅರ್ಥದಲ್ಲಿ ಸರಳೆ ಹಾಗೆಂದುಕೊಂಡಳೋ!

ರಮೇಶನ ಮನಸ್ಸಿನ ಒಂದು ಬದಿಯಲ್ಲಿ ಜ್ವರಪೀಡಿತಳಾದ ಸುಮಿತ್ರೆ, ಇನ್ನೊಂದು ಬದಿಯಲ್ಲಿ ನಿರಾಶ್ರಿತೆಯಾದ ಸರಳೆ—ಹೀಗೆ

ನಿಂತು ಕಬ್ಬಿನ ಗಾಣದಲ್ಲಿ ಎರಡು ಕಬ್ಬಿಣದ ಉರುಳುಗಳು ಕಬ್ಬನ್ನು ಹಿಂಡುವಂತೆ ಅವನ ಮನಸ್ಸನ್ನು ಹಿಂಡುತ್ತಿದ್ದರು. ಸರಳೆಯನ್ನು ಸುಮಿತ್ರೆ ಹೇಗೆ ನೋಡಿಕೊಳ್ಳುವಳೋ! ಸರಳೆಯ ಜೀವನಲತೆ ಆಕೆಯಿಂದಾಗಿ ಮುರುಟಬಾರದಲ್ಲ! ಎಂಬುದಾಗಿ ಸರಳೆಯ ಕುರಿತು ಚಿಂತೆ ಒಂದು ಬದಿಯಲ್ಲಾದರೆ, ಸುಮಿತ್ರೆ ಜ್ವರದಿಂದ ಹೇಗೆ ಸಂಕಟ ಪಡುತ್ತಿದ್ದಾಳೋ ಎಂಬ ಚಿಂತೆ ಇನ್ನೊಂದು ಬದಿಯಲ್ಲಿ.

ಎಲ್ಲರೂ ಒಂದೇ ತೆರವಾದುದರಿಂದ ಯಾರೂ ಮಾತು ತೆಗೆಯಲಿಲ್ಲ. ಕಾರು ಹತ್ತು ಮಿನಿಟಿನಲ್ಲಿ ಒಂದು ಭವ್ಯವಾದ ಮಹಲಿನೆದುರು ಬಂದು ಗಕ್ಕನೆ ನಿಂತಿತು. "ಇದೇ ನಮ್ಮ ಮನೆ ಸರಳಾ." ಕಾರಿನಿಂದಿಳಿದು "ಒಳಗೆ ಹೋಗೋಣ" ಎಂದನು ರಮೇಶ.

ಸರಳೆ ಚಿಂತಾಲೋಕದಿಂದ ಕಣ್ಣು ತೆರೆದು ನೋಡಿದಳು—ಸುಂದರ ಉದ್ಯಾನದಿಂದ ಸುತ್ತುವರಿಯಲ್ಪಟ್ಟ ಭವ್ಯವಾದ ಮಹಲು ಇದಿರಿಗೆ ನಿಂತಿತ್ತು. ಆ ಸುಂದರ ಮಂದಿರ ಇನ್ನು ತನ್ನ ಮನೆ; ತಾನಿನ್ನದರಲ್ಲಿ ವಾಸಮಾಡುವವಳು! ಆಕೆಯ ಬಗೆಗಣ್ಣು ಆಗ ತನ್ನ ಮೊದಲಿನ ಮುರುಕು ಗುಡಿಸಲನ್ನು ಈ ಮನೆಯ ಪಕ್ಕದಲ್ಲಿ ನಿಲ್ಲಿಸಿ ಹೋಲಿಸಿತು. ಅದೆಲ್ಲಿ? ಇದೆಲ್ಲಿ? ಅವುಗಳೊಳಗೆ ಎರಡು ಧ್ರುವಗಳ ಅಂತರ! ಅದು ತನ್ನದು. ಇದು—ಇದು ಯಾರದು? ರಮೇಶನದೋ? ಸುಮಿತ್ರೆಯದೋ?

ಸುಮಿತ್ರೆಯನ್ನು ಕಾಣುವ ಆತುರದಿಂದ ರಮೇಶ ಒಳಗೆ ಓಡಿದ. ಏನು ಮಾಡಲೆಂದರಿಯದೆ ಸರಳೆಯೂ ಆತನನ್ನು ಹಿಂಬಾಲಿಸಿದಳು.

ರಮೇಶ ಸುಮಿತ್ರೆಯ ಕೋಣೆಯನ್ನು ಪ್ರವೇಶಿಸಿದ್ದ. ಸರಳೆ ಕೋಣೆಯನ್ನು ಪ್ರವೇಶಿಸದೆ, ಬಾಗಿಲ ಮರೆಯಲ್ಲಿ ತಡೆದು ನಿಂತಳು. ತನಗೆ ರಮೇಶನ ಪತ್ನಿಯಿಂದ ಯಾವ ರೀತಿಯ ಸ್ವಾಗತ ದೊರಕೀತೆಂದು ಅರಿಯದೆ, ಸರಳೆ ಆ ಕೋಣೆಯನ್ನು ಪ್ರವೇಶಿಸಿ ಹಠಾತ್ತಾಗಿ ಆಕೆಯೆದುರು ನಿಲ್ಲಲು ಇಷ್ಟಪಡಲಿಲ್ಲ.

ಸುಮಿತ್ರೆ ಮಂಚದ ಮೇಲೆ ಹಾಸಿಗೆಯಲ್ಲಿ ಕಣ್ಮುಚ್ಚಿ ಮಲಗಿದ್ದಳು. ರಮೇಶ ಆಕೆಯ ಬಳಿ ನಿಂತು ಆಕೆಯ ಹಣೆ ಮುಟ್ಟಿ ನೋಡಿದ. ಹಣೆ

ಹೆಚ್ಚು ಬಿಸಿ ಇರಲಿಲ್ಲ. ಹಣೆ ಮುಟ್ಟಿದುದರಿಂದ ಸುಮಿತ್ರೆ ಕಣ್ದೆರೆದಳು. ಎದುರಿಗೆ ರಮೇಶ! "ಸುಮಿತ್ರಾ!" ಎಂದು ಕರೆದನು. ಸುಮಿತ್ರೆ ಅಲುಗಾಡಲಿಲ್ಲ.

"ಜ್ವರ ಇಳಿಯಿತೇ ಸುಮಿತ್ರಾ?" ಅತ್ಯಂತ ಕೋಮಲ ಕಂಠದಿಂದ ಕೇಳಿದನು ರಮೇಶ.

"ಇಳಿಯದಿದ್ದರೆ ನಿಮಗೇನು? ಈಗ ಯಾಕೆ ಬಂದಿರಿ? ಅಲ್ಲೇ ಕುಳಿತಿರಬಾರದಿತ್ತೇ ಯಾರ್‍ಯಾರೊಡನೆ ಚಕ್ಕಂದ ಹೊಡೆಯುತ್ತಾ?"

ಒಳಗಿನ ಸಂಭಾಷಣೆ ಹೊರಗೆ ನಿಂತ ಸರಳೆಗೆ ಕೇಳಿಸುತ್ತಿತ್ತು. ಕೇಳಿ ಆಕೆ ಬೆದರಿದಳು. ಹಲವು ದಿನ ಬಿಟ್ಟು ಆಗ ತಾನೇ ಬಂದ ಗಂಡನೊಡನೆ ಹೆಂಡತಿ ಹೀಗೆ ಹೇಳಬೇಕಾದರೆ........! ಸುಮಿತ್ರೆಯನ್ನು ನೆನೆದು ಸರಳೆ ಬೆದರಿದಳು. ಗಂಡನನ್ನೇ ಬೆದರಿಸುವವಳು ಇನ್ನು ತನ್ನನ್ನು ಏನು ಮಾಡಲಾರಳು?........ಕತ್ತರಿಯಲ್ಲಿ ಸಿಕ್ಕಿಬಿದ್ದ ಇಲಿಯಂತೆ ಚಡಪಡಿಸಿದಳು ಸರಳೆ.

ಪಾಪ! ಸರಳೆಗೇನು ಗೊತ್ತು? ಸುಮಿತ್ರೆ ಅಷ್ಟು ಕ್ರೂರಳಲ್ಲ; ಅದು ಆಕೆಯ ಪ್ರಣಯಕೋಪದ ನಟನೆಯೆಂದು!

"ನೋಡು ಸುಮಿತ್ರಾ, ನಾನು ಯಾರನ್ನು ಕರೆತಂದಿರುವೆನೆಂದು!" ಸುಮಿತ್ರೆಯಲ್ಲಿ ಕುತೂಹಲ ಹುಟ್ಟಿಸುವುದಕ್ಕಾಗಿ ಹೀಗೆ ನುಡಿದನು ರಮೇಶ.

ಫಕ್ಕನೆ ತನ್ನ ಕೋಪದ ನಟನೆಯನ್ನು ಮರೆತು ಸುಮಿತ್ರೆ ಕೇಳಿದಳು "ಯಾರನ್ನು ಕರೆತಂದಿರಿ?"

"ನಿನಗೊಬ್ಬಳು ತಂಗಿಯನ್ನು" ರಮೇಶ ತುಂಟನಗೆಯಿಂದ ಹೇಳಿದನು. ಅವನ ಜೀವ ಬೇಯುತ್ತಿತ್ತು—ಮಾತಿಗೆ ಸುಮಿತ್ರೆ ಏನೆನ್ನುವಳೋ ಎಂದು. ಆಕೆ "ನನಗೆ ತಂಗಿಯ ಅಗತ್ಯವಿಲ್ಲ!" ಎಂದು ತಕ್ಷಣದಲ್ಲಿಯೇ ಏನೋ ಯೋಚನೆ ಮಾಡುವಳಂತೆ ಸ್ಥಬ್ಧಳಾದಳು. ಆದರೆ ಮತ್ತೆ "ತಂಗಿ ಎಂದರೆ ಸವತಿಯನ್ನೇ? ಎಲ್ಲಿ ನೋಡೋಣ!" ರಮೇಶ ಸುಳ್ಳು ಹೇಳುತ್ತಿರಬಹುದೆಂದು ತಿಳಿದು ಕೇಳಿದಳು ಸುಮಿತ್ರೆ.

"ಕರೆತರುತ್ತೇನೆ" ಎನ್ನುತ್ತಾ ರಮೇಶ ಸರಳೆಯನ್ನು ಸುಮಿತ್ರೆಯ ಸನ್ನಿಧಾನಕ್ಕೆ ಕರೆದುಕೊಂಡು ಹೋಗಲು ಹೊರಬಂದನು. "ಅಲ್ಲೇಕೆ

ನಿಂತೆ? ಬಾ ಸರಳಾ!" ಎಂದು ಕರೆದನು. ಸರಳೆಯ ಮೈ ಗಡಗಡನೆ ನಡು
ಗುತ್ತಿತ್ತು. ಆಕೆ ತಲೆ ತಗ್ಗಿಸಿಕೊಂಡು ಮೆಲ್ಲಮೆಲ್ಲನೆ ರಮೇಶನನ್ನು
ಹಿಂಬಾಲಿಸಿದಳು.

ಸುಮಿತ್ರೆ ನೋಡಿದಳು—ನಿಜವಾಗಿ ರಮೇಶ ತನಗೊಬ್ಬಳು ಸವತಿ
ಯನ್ನು ಕರೆತರುತ್ತಿದ್ದಾನೆ! ಆತನ ಹಿಂದೆ ರೂಪಸೀ ಕಿಶೋರಿಯೊಬ್ಬಳು
ತನ್ನ ವಿವಶ ಪಾದಗಳನ್ನು ಮೆಲ್ಲಮೆಲ್ಲನೆ ಎತ್ತಿಡುತ್ತಾ ಕೋಣೆಯನ್ನು
ಪ್ರವೇಶಿಸುತ್ತಿದ್ದಾಳೆ! ಸುಮಿತ್ರೆಯ ಮುಖ ಕೆಂಪಾಯಿತು. ಕಣ್ಣು
ಗಳು ಅಗಲವಾದುವು. ಮಲಗಿದ್ದವಳು ಎದ್ದುನಿಂತು ತನ್ನ ಸೆರಗನ್ನು
ಸೊಂಟದ ಸುತ್ತ ಕಟ್ಟಿಕೊಂಡು ಸೊಂಟಕ್ಕೆ ಎರಡೂ ಕೈಯೂರಿ ನಿಂತಳು.
ಸುಮಿತ್ರೆಯಲ್ಲಾದ ಈ ಬದಲಾವಣೆಯನ್ನು ಕಂಡು ಬೆದರಿದನು ರಮೇಶ.
ಅವನ ನಾಲಿಗೆ ಅಲುಗಾಡದಾಯಿತು. ಹಾಗೆಯೇ ನಿಂತನು.

ಸುಮಿತ್ರೆ ತೀವ್ರಗತಿಯಿಂದ ಸರಳೆಯ ಬಳಿಗೆ ತಂದು ತನ್ನ ಕೈ
ಗಳಿಂದ ಸರಳೆಯ ಸುಮಸುಂದರ ಮುಖವನ್ನು ಎತ್ತಿ ನೋಡಿದಳು—
ಆಕೆ ನಿಜವಾಗಿಯೂ ಸುಂದರಿ! ತನಗಿಂತಲೂ ಸುಂದರಿ ತನ್ನ ಸವತಿ!
ಇನ್ನು ಪತಿಯ ಪ್ರೇಮವೆಲ್ಲಾ ಆಕೆಗೆ ಮೀಸಲು ಎಂದು ಬೆದರಿದಳು
ಸುಮಿತ್ರೆ. ರಮೇಶನನ್ನು ಕ್ರೂರದೃಷ್ಟಿಯಿಂದ ನೋಡುತ್ತಾ ಗಡಸುದನಿ
ಯಿಂದ ಕೇಳಿದಳು—"ಮದುವೆಯಾಗುವಾಗ ನನಗೇಕೆ ತಿಳಿಸಲಿಲ್ಲ?"

ರಮೇಶ ತನಗಿಲ್ಲದ ಚೈತನ್ಯವನ್ನು ತಂದುಕೊಂಡು ತೊದಲುತ್ತಾ
ನುಡಿದನು—"ನಾನು ಮದುವೆ ಮಾಡಿಕೊಂಡಿಲ್ಲ—ಹಾಗೇ ಕರೆದು ತಂದೆ.
ನಾನು ಮದುವೆಯಾಗುವುದೂ ಇಲ್ಲ........ಈಕೆ ನಿನ್ನ ಸವತಿಯಲ್ಲ....
ತಂಗಿ ಮಾತ್ರ........"

"ಸುಳ್ಳು ಹೇಳುವಿರಾ?" ಎಂದು ದನಿಯನ್ನು ಸ್ವಲ್ಪ ಮೆತ್ತಗೆ ಮಾಡಿ
ನುಡಿದಳು. ಆಕೆಗೆ ಈಗ ತಿಳಿದಿತ್ತು—ರಮೇಶ ಏನೋ ಕಪಟನಾಟಕ
ಹೂಡುತ್ತಿರುವನೆಂದು.

"ನಾನೇಕೆ ಸುಳ್ಳು ಹೇಳಲಿ? ನಿನ್ನಾಣೆ ಸತ್ಯ......." ಎಂದನು
ರಮೇಶ.

ಸುಮಿತ್ರೆ ಈಗ ನಂಬಲೇಬೇಕಾಯಿತು. ಆಕೆಗೆ ಎಂತಹ ಅಪ ಮಾನ! ಈ ಹೊಸಬಳೊಬ್ಬಳ ಎದುರು ರಮೇಶ ಆಕೆಯ ಮರ್ಯಾದೆ ಯೆಲ್ಲವನ್ನೂ ಕಳೆದಿದ್ದ. ತನ್ನ ಬಗೆಗೆ ತನಗೇ ನಾಚಿಕೆಯಾಗಿ ಸುಮಿತ್ರೆ ಕೈಗಳಿಂದ ಮುಖ ಮುಚ್ಚಿಕೊಂಡು ಹಾಸಿಗೆಯ ಮೇಲೆ ಉರುಳಿದಳು. ರಮೇಶ ಕಾತರದಿಂದ ಧಾವಿಸಿ ನೋಡಿದ—ಆಕೆಯ ಮೈ, ಮುಖ ಎಲ್ಲವೂ ಬೆಂಕಿಯಂತೆ ಸುಡುತ್ತಿದ್ದುವು!

ಸರಳೆ ಏನೂ ಅರಿಯದೆ, ಬೇಟೆಗಾರನ ಕೈಗೆ ಸಿಕ್ಕಿದ ಚಿಗರಿಯಂತೆ ನಡುಗುತ್ತಿದ್ದಳು. ಆಕೆಯ ಕಿವಿಯಲ್ಲಿ ಈ ಎರಡು ಮಾತುಗಳು ಗುಂಯ್ ಗುಟ್ಟುತ್ತಿದ್ದುವು:

"ಈಕೆಯನ್ನು ನೀವು ಮದುವೆಯಾಗುವಾಗ ನನಗೇಕೆ ತಿಳಿಸಲಿಲ್ಲ?"

"ನಾನು ಮದುವೆ ಮಾಡಿಕೊಂಡಿಲ್ಲ. ಮಾಡಿಕೊಳ್ಳುವುದೂ ಇಲ್ಲ. ಈಕೆ ಸವತಿಯಲ್ಲ—ತಂಗಿ ಮಾತ್ರ!"

೨

"ರಮೇಶ ವಿವಾಹಿತ. ನಾನು ಅವನ ಬಳಿ ಇರಬಾರದು. ಅವನ ಸಂಸಾರದ ಮಧ್ಯದಲ್ಲಿ ನಾನೊಬ್ಬಳು ಬಂದು ವಿರಸ ಹುಟ್ಟಿಸಬಾರದು" ಎಂಬ ಯೋಚನೆ ಸರಳೆಯ ಮನದಲ್ಲಿ ನೂರಾರು ಬಾರಿ ಸುಳಿಯಿತು. ಅದರೊಡನೆ, ನಾನು ಸ್ವತಂತ್ರಳಾಗಿರಬೇಕು. ನನ್ನ ಹೊಟ್ಟೆ ನಾನು ತುಂಬಿಕೊಳ್ಳಬೇಕು. ನಾನು ಹುಟ್ಟಿದುದಕ್ಕೆ ಕಿಂಚಿತ್ತಾದರೂ ಸಾಫಲ್ಯ ಪಡೆಯಬೇಕು ಎಂಬ ವಿಚಾರವೂ ಆಕೆಯ ಮನಸ್ಸಿನಲ್ಲಿ ಮೂಡತೊಡ ಗಿತು. ಅದೆಷ್ಟನೆಯ ಬಾರಿಯೋ ಅವಳು ಈ ರೀತಿ ಯೋಚಿಸಿದುದು! ತನ್ನ ಈ ಕನಸುಗಳನ್ನು ರಮೇಶನೊಡನೆ ಹೇಳಿಕೊಳ್ಳಬೇಕು—ಅವನಿಂದ ತನ್ನ ಹೊಸ ಯೋಚನೆಗೆ ಅನುಮತಿ ಪಡೆಯಬೇಕು ಎಂದು ಈಗಲೂ ಮತ್ತೂ ಯೋಚಿಸುತ್ತಿದ್ದಳು ಆಕೆ.

ಅಂತೂ ಸರಳೆ ಮಂಗಳೂರಿಗೆ ಬಂದು ಒಂದು ವಾರ ಕಳೆದಿತ್ತು. ಬಂದ ಕಾಲದಲ್ಲಿದ್ದ ಭಯ ಸ್ವಲ್ಪ ಕಳೆದಿತ್ತು. ತನ್ನ ಈ ನೆನಹುಗಳ

ಕನಸುಗಳನ್ನು ಕಾಣುತ್ತಿದ್ದಾಗಲೇ ಆಕೆಗೆ ಸುಮಿತ್ರೆಯಿಂದ ಆ ಮನೆ ಯಲ್ಲಿ ಸಿಕ್ಕಿದ ಪ್ರಥಮ ಸ್ವಾಗತದ ಪ್ರಕರಣ ಮನಸ್ಸಿನೆದುರು ಆಗಾಗ ಬಂದು ನಿಲ್ಲುವುದು. ಅದನ್ನು ಯೋಚಿಸುತ್ತಾ ಆಕೆಗೆ ಭಯವುಂಟಾಗಿ ನಡುಗಿ ಹೋಗುವಳು. "ಇಲ್ಲ! ಇಲ್ಲಿ ಆಶ್ರಿತೆಯಾಗಿ ಬಾಳುವುದು ನನ್ನಿಂದ ಶಕ್ಯವಿಲ್ಲ—ನನ್ನ ದಾರಿ ನಾನು ಕಂಡುಕೊಳ್ಳಬೇಕು!" ಎಂಬ ಮನದ ನಿಶ್ಚಯ ಮತ್ತೆ ಮತ್ತೆ ಆಕೆಯ ಮನಸ್ಸಿನಲ್ಲಿ ಮೂಡಿಬರುತ್ತಿತ್ತು.

ರಮೇಶ ಸರಳೆಗೆ ಈ ಮೊದಲಿನ ರಮೇಶನಲ್ಲ. ಈಗ ಆಕೆ ಆತ ನನ್ನು "ರಮೇಶಣ್ಣಾ!" ಎಂದೇ ಕರೆಯುತ್ತಾಳೆ. "ಅಣ್ಣಾ" ಎಂದು ಕರೆ ದರೂ ಆ ಭಾವನೆಯನ್ನು ಮನಸ್ಸಿನಲ್ಲಿ ಮೂಡಿಸುವುದಂತೂ ವಿಪರೀತ ಕಷ್ಟವಾಗುತ್ತಿತ್ತು ಸರಳೆಗೆ. ಅವನ ಮೇಲೆ ಬೆಳೆದ ಆಕೆಯ ಪ್ರೇಮದ ಬಳ್ಳಿಯನ್ನು ಆತನ ಸಮಕ್ಷಮದಲ್ಲಿದ್ದುಕೊಂಡೇ ಅದನ್ನು ಅಡಗಿಸಿ ಇಡುವುದಂತೂ ನೆನಸಲಾರದ ಕಷ್ಟವಾಗಿ ಪರಿಣಮಿಸುತ್ತಿತ್ತು. ಅಡಗಿ ಸದೆ ಒಂದಿಷ್ಟು ತನ್ನ ನಡೆನುಡಿಗಳಲ್ಲಿ ಆ ಭಾವನೆಯು ತಲೆದೋರಿದರೆ.... ತಲೆಯ ಮೇಲಿನಿಂದ ಸುಮಿತ್ರೆ ಇದ್ದಾಳೆ—ಎಂಬ ವಿಚಾರ ಅವಳನ್ನು ಎಚ್ಚರಿಸುತ್ತಿದ್ದಿತು. ಆದುದರಿಂದ ಆಕೆ ರಮೇಶನಿಂದ ಸಾಧ್ಯವಾದಷ್ಟು ದೂರ ಇರಲು ಇಚ್ಛಿಸುತ್ತಿದ್ದಳು.

ಸರಳೆ ಏಕಾಂತವಾಗಿ ಅತ್ತು ಅತ್ತು ದೇವರನ್ನು ತನ್ನ ಅಸಹಾಯ ಸ್ಥಿತಿಗಾಗಿ ಪ್ರಾರ್ಥಿಸುತ್ತಿದ್ದಳು; "ದೇವಾ! ಈ ಬಂಧನದಿಂದ ಬಿಡಿಸಿ ಕೊಂಡು ಹೋಗಲು ನನ್ನನ್ನು ಪ್ರೀತಿಸಿದ ಆ ಸುಧಾಕರನನ್ನು ಕಳುಹಿಸಿ ಕೊಡು—ಸುಧಾಕರನನ್ನು ನನಗೆ ಕೊಡು!" ಆದರೆ "ಇಂದು ಆ ಸುಧಾ ಕರ ಎಲ್ಲಿ?" ಎಂಬ ಯೋಚನೆಯಂತೂ ನಿತ್ಯವೂ ಬರತೊಡಗಿತು. ಅವಳ ಮೇಲೆ ಇದ್ದ ಸುಧಾಕರನ ಆ ಅನಂತಪ್ರೇಮ ಸರಳೆಯ ಮನ ಸ್ಸಿನ ಮೇಲೆ ಅಂತಹ ದುರ್ವಾರ ಪರಿಣಾಮವನ್ನು ಉಂಟುಮಾಡಿತ್ತು!

ಸರಳೆ ತನ್ನ ಯೋಚನೆಯನ್ನು ಒಂದು ದಿನ ರಮೇಶನ ಮುಂದಿ ಟ್ಟಳು—"ರಮೇಶಣ್ಣಾ! ನನಗೆ ಈ ಅರಮನೆಯಲ್ಲಿ ಕುಳಿತು ಹೊತ್ತು ಹೋಗುವುದಿಲ್ಲ. ಹೊತ್ತು ಹೋಗುವುದಕ್ಕಾಗಿ ಏನಾದರೂ ಮಾಡ ಬಯಸುತ್ತೇನೆ."

ರಮೇಶ ತಟ್ಟನೆ ಉತ್ತರ ಕೊಟ್ಟ—"ಯಾರು ಬೇಡವೆಂದರು? ಬೇಕಾದಷ್ಟು ಪತ್ರಿಕೆಗಳಿವೆ; ಪುಸ್ತಕಗಳಿವೆ. ಹೊತ್ತು ಹೋಗದುದಕ್ಕಾಗಿ-ಮನರಂಜನೆಗಾಗಿ—ಅವುಗಳನ್ನು ಓದು."

ಆದರೆ ಪತ್ರಿಕೆ ಪುಸ್ತಕ ಓದುವುದರಿಂದ ಸರಳೆಯ ಅಭಿಲಾಷೆ ನೆರವೇರುವುದೇ? ತನ್ನ ಅಭಿಪ್ರಾಯವನ್ನು ಮತ್ತಷ್ಟು ಸ್ಪಷ್ಟವಾಗಿ ಹೇಳಿದಳು ಸರಳೆ—"ಹಾಗಲ್ಲ ರಮೇಶಣ್ಣಾ! ನಾನು ಏನಾದರೂ ವೃತ್ತಿಮಾಡ ಬಯಸುತ್ತೇನೆ."

ರಮೇಶ ಸ್ವಲ್ಪ ಯೋಚಿಸಿ ನುಡಿದನು—"ಧಾರಾಳವಾಗಿ! ಕಸೂತಿಯೋ ಯಾವುದು ಬೇಕಾದರೂ ಕಲಿಯಬಹುದು. ನಾಳೆಯಿಂದಲೇ ಬೇಕಾದರೆ ಅವುಗಳನ್ನು ಕಲಿಸಲು ಉಪಾಧ್ಯಾಯಿನಿಯರನ್ನೂ ಸಹ ನೇಮಿಸುತ್ತೇನೆ."

"ವೃತ್ತಿ ಎಂದರೆ ಉದ್ಯೋಗ..........."

ಚಕಿತನಾಗಿ ರಮೇಶ ಕೇಳಿದನು—"ಎಂತಹ ಉದ್ಯೋಗ?"

ಎಂತಹ ಉದ್ಯೋಗವೆಂದು ಸರಳೆ ಹೇಗೆ ಹೇಳಬಲ್ಲಳು? ಆಕೆಯ ಮನಸ್ಸಿಗೆ ಅದು ದೃಢವಾಗಲಿಲ್ಲ. ಆದರೆ ಆ ಬಗ್ಗೆ ಹಿಂಗದ ಹಂಬಲ ಮಾತ್ರ ಇತ್ತು.

"ಯಾವ ಉದ್ಯೋಗವೆಂದು ನಾನೇನೂ ನಿಶ್ಚಯ ಮಾಡಿಲ್ಲ. ನೀನೇ ಹೇಳು ರಮೇಶಣ್ಣಾ! ಅನುಕೂಲವಾದುದು ಯಾವುದಾದರೂ...."

"ಗೃಹಿಣಿಯರಿಗೆ ಉಚಿತವಾದ ಉದ್ಯೋಗ ಅದೇ. ಆಗ ನಾನು ಹೇಳಿದೆನಲ್ಲಾ........ಸರಿ ತಿಳಿಯಿತು—ನಿನ್ನ ಅಭಿಪ್ರಾಯ. ಸ್ವತಂತ್ರ ಜೀವನ ಮಾಡಲು ಉದ್ಯೋಗ ಹುಡುಕುವೆಯಾ?"

"ಹೂಂ........"

ನಿಟ್ಟುಸಿರೆಳೆದು ರಮೇಶ ಹೇಳಿದ—"ಯಾಕೆ ಬಂತು ತಂಗೀ—ನಿನಗೀ ಯೋಚನೆ? ನೀನು ಗಳಿಸಹೊರಡುವೆಯಾ? ನಿನ್ನ ಈ ಅಣ್ಣ ನಿನಗೇನು ಕಡಿಮೆ ಮಾಡಿದ್ದಾನೆ?........ ನನ್ನ ಯೋಚನೆಯೇ ಬೇರೆ. ನಿನಗೆ ಪ್ರಾಯ ತುಂಬಿತು. ಶ್ರೀಮಂತನಾದ ಯೋಗ್ಯ ವರನನ್ನು

ಹುಡುಕಿ ಮದುವೆ ಮಾಡಿಸಬೇಕು. ನೀನಿನ್ನು ಉದ್ಯೋಗ ಮಾಡಬೇಕಾಗಿಲ್ಲ. ಗೃಹಿಣಿಯಾಗಿ ನಿನ್ನ ಮನೆ ಬೆಳಗಬೇಕು—"

ಮದುವೆಯ ವಾರ್ತೆ ಕೇಳಿ ಸರಳೆಯ ಮುಖ ಕೆಂಪಾಯಿತು. ಸಿಟ್ಟಿನಿಂದಲೋ ಲಜ್ಜೆಯಿಂದಲೋ ತಿಳಿಯಲಿಲ್ಲ!

ರಮೇಶ ತನ್ನ ಆಸೆಯನ್ನು ಪುರಸ್ಕರಿಸಲಿಲ್ಲವೆಂದು ಸರಳೆ ನಿರಾಶಳಾಗಲಿಲ್ಲ. ಆಕೆ ಮೊದಲು ತನ್ನ ಮನಸ್ಸನ್ನು ದೃಢಪಡಿಸಿಕೊಳ್ಳತೊಡಗಿದಳು. ತಾನು ಯಾವ ಉದ್ಯೋಗ ವಹಿಸಬೇಕೆಂದು ಆಕೆ ಮೊದಲು ನಿಶ್ಚಯಿಸಬೇಕಿತ್ತು.

ಸುಮಿತ್ರೆಯ ಜ್ವರ ದಿನದಿನಕ್ಕೆ ಏರುತಿದ್ದಿತೇ ಹೊರತು ಕಡಿಮೆಯಾದ ಕುರುಹೇ ಕಾಣಬರಲಿಲ್ಲ. ಡಾಕ್ಟರರ ಪರೀಕ್ಷೆ, ಔಷಧಿ ಒಂದೇಸವನೆ ರಮೇಶನು ನಡೆಸಿದ್ದ. ಅಂದಿನ ವಿಚಿತ್ರ ಘಟನೆಯಿಂದ "ಏರಿದ ಜ್ವರ ಒಮ್ಮೆ ಇಳಿದು ತನ್ನ ಸುಮಿತ್ರೆಗೆ ವಾಸಿಯಾದರೆ........" ಎಂಬ ಯೋಚನೆ ರಮೇಶನನ್ನು ಕಾಡತೊಡಗಿತು. ಅದಕ್ಕಾಗಿ ಅವನು ಪಟ್ಟ ಪರಿಶ್ರಮ ಅಷ್ಟಿಷ್ಟಲ್ಲ. ಆಕೆಯ ಉಪಚಾರಕ್ಕೆ ನಗರದಲ್ಲಿಯೇ ಹೆಸರಾಂತ ಡಾಕ್ಟರರನ್ನು ಗೊತ್ತುಪಡಿಸಿದ್ದನು. ಡಾಕ್ಟರರು ದಿನಕ್ಕೆರಡು ಬಾರಿ ಬಂದು ನೋಡಿಕೊಂಡು ಹೋಗುತ್ತಿದ್ದರು. ರೋಗಿಯ ಉಪಚಾರಕ್ಕೆ ಕುಶಲಳಾದ ನರ್ಸೊಬ್ಬಳನ್ನು ಡಾಕ್ಟರರು ಮನೆಯಲ್ಲಿಯೇ ನಿಂತು ಉಪಚರಿಸುವಂತೆ ನೇಮಿಸಿದ್ದರು.

ಸರಳಾ ಕುತೂಹಲದಿಂದ ಆ ನರ್ಸನ್ನು ನೋಡುತ್ತಿದ್ದಳು. ಆಕೆಯ ಉಡುಗೆತೊಡುಗೆಯಂತೂ ಹಳ್ಳಿಯುವಳಾದ ಸರಳೆಗೆ ಕೌತುಕದ ವಿಷಯವಾಗಿತ್ತು. ಅದಕ್ಕಿಂತಲೂ ಹೆಚ್ಚು ಆಕೆಯ ಮನಸ್ಸನ್ನೆಳೆದುದೆಂದರೆ ಆಕೆಯ ಸೇವಾವೃತ್ತಿ. ಸಂಕಟದಿಂದ ನರಳುವ ರೋಗಿಯನ್ನು ಆಕೆ ಎಷ್ಟು ಪ್ರೀತಿಯಿಂದ ಉಪಚರಿಸುತ್ತಿದ್ದಾಳೆ! ಆಕೆಯ ವೃತ್ತಿಯೆಂದರೆ ಜನತೆಗೆ ಸೇವೆ ಸಲ್ಲಿಸುವ ವೃತ್ತಿ. ಅವಳನ್ನು ನೋಡಿದಂದಿನಿಂದ ತಾನೂ ಹಾಗೆ ಜನತೆಗೆ ಸೇವೆ ಸಲ್ಲಿಸಲಾರೆನೇ ಎಂಬ ಯೋಚನೆ ಸರಳೆಯ ಮನದಲ್ಲಿ ಮೂಡತೊಡಗಿತ್ತು!

ಯಾವ ವೃತ್ತಿಯನ್ನಾರಿಸಿಕೊಳ್ಳಲಿ ಎಂದು ಯೋಚಿಸುತ್ತಿದ್ದ ಸರಳೆ ಮನಸ್ಸಿನಲ್ಲಿ ನಿಶ್ಚಯ ಮಾಡಿಕೊಂಡಳು—"ಈ ನರ್ಸ್ ವೃತ್ತಿಯನ್ನು ಬಿಟ್ಟರೆ ಬೇರೆ ವೃತ್ತಿಯಿಲ್ಲ."

ಸುಮಿತ್ರೆಯನ್ನು ಉಪಚರಿಸುತ್ತಿದ್ದ ನರ್ಸಳ ಗೆಳೆತನವನ್ನು ಸರಳೆ ಸಂಪಾದಿಸಿಕೊಂಡಳು. ಆಕೆಯಿಂದ ನರ್ಸ್ ಜೀವನದ ವಿಷಯ ತುಂಬಾ ಕೇಳಿದಳು. ಸುಂದರಿಯಾದ ಸರಳೆ ನರ್ಸ್ ಆಗಿ ಜನರ ಸೇವೆ ಮಾಡಲೇ ಬೇಕೆಂದು ಆಕೆ ಪ್ರೋತ್ಸಾಹ ಕೊಟ್ಟಳು. ಆಕೆಯಿಂದ ಸರಳೆಯ ಇಚ್ಛಿತವು ಕೊನರೊಡೆಯಿತು.

ನರ್ಸ್ ಶಿಕ್ಷಣ ಪಡೆಯಲು ಸರಳೆಯ ಮನ ದೃಢಪಟ್ಟಿತು. ಆದರೆ ಅದಕ್ಕೆ ರಮೇಶನ ಒಪ್ಪಿಗೆ ಪಡೆಯುವುದು ಮಾತ್ರ ಬಾಕಿಯಿತ್ತು. ರಮೇಶನೊಡನೆ ಮೊದಲೊಮ್ಮೆ ಕೇಳಿದ್ದಾಗ—"ನೀನಿನ್ನು ಉದ್ಯೋಗ ನೋಡುವವಳಲ್ಲ. ಮದುವೆಯಾಗಿ ನಿನ್ನ ಮನೆಯನ್ನು ಬೆಳಗುವವಳು!" ಎಂದು ಉತ್ತರ ನುಡಿದಿದ್ದ.

ಸರಳೆಯ ಯೋಚನೆ ರಮೇಶನಿಗೆ ಒಗ್ಗದಿದ್ದರೂ ಯಾವೊಂದು ನಿರ್ಧಾರವನ್ನು ನುಡಿಯಲೂ ಅವನ ಮನಸ್ಸು ಅಸಮಾಧಾನಗೊಳ್ಳುತ್ತಿತ್ತು. ಸರಳೆಯ ಮೇಲಿನ ಮೋಹ ಒಂದೆಡೆ ಕಾಡುವುದಾದರೆ ಇನ್ನೊಂದೆಡೆ ಸುಮಿತ್ರೆಯ ಉಗ್ರಮೂರ್ತಿಯ ನೆನಪು ಕಾಡತೊಡಗುವುದು.

ಸರಳೆಯು ನರ್ಸ್ ಶಿಕ್ಷಣ ಪಡೆಯಬೇಕಾದರೆ ಅವಳು ಮದ್ರಾಸಿಗೆ ಹೋಗಿಯೇ ತೀರಬೇಕು. ಹಾಗೆ ಅವಳಿಷ್ಟದಂತೆ ಅವಳನ್ನು ಮದ್ರಾಸಿಗೆ ಕಳುಹಿದರೆ ಅಗಲಿರಬೇಕಲ್ಲಾ! ಎಂದು ಒಂದು ಬಗೆಯ ವ್ಯಥೆಯೂ ಮನಸ್ಸಿನಲ್ಲಿ ಮೂಡಿ ಬಂದಿತ್ತು. ಊರಲ್ಲಿದ್ದರೂ ಕೈಹಿಡಿದಾಕೆಯ ಮುಂದೆ ಈಕೆಯನ್ನು ಹೇಗೆ ಕಾಣಬೇಕೆಂಬ ಸಮಸ್ಯೆಯಂತೂ ರಮೇಶನಿಗೆ ಬಗೆಹರಿಯದ ಸಮಸ್ಯೆಯಾಗಿತ್ತು.

ತಂಗಿಯೆಂದು ಭಾವಿಸಿ ಅವಳನ್ನು ತಾನು ರಕ್ಷಿಸಬೇಕು ಎಂದೊಮ್ಮೆ ಎಣಿಸುತ್ತಾನೆ. ಅವಳಿಗೆ ಯೋಗ್ಯ ವರನನ್ನು ಹುಡುಕಿ ಮದುವೆ ಮಾಡೋಣ ಎಂದು ಆಗಾಗ ಭಾವಿಸುತ್ತಾನೆ. ಆದರೆ ಮನಸ್ಸು ಚಂಚಲವಾಗಿಯೇ

ನಲಿಯುತ್ತಿದೆ. ಆತನ ಮೋಹದಂಕುರ ಆತನ ಯೋಜನೆಗಳಿಗೆಲ್ಲಾ ಅಡ್ಡಿಯಾಗಿದೆ. ಆ ಮೋಹದ ಸೆರಗು ಸುಮಿತ್ರೆಯ ಸುಳಿಯಲ್ಲಿ ಸಿಕ್ಕಿ ಬಳಲಿ ಹೋಗಿದೆ.

ಸರಳೆಯ ಇಚ್ಛೆಗೆ ವಿರುದ್ಧವಾಗಿ ವರ್ತಿಸಲು ರಮೇಶನಿಂದ ಯಾವ ರೀತಿಯಲ್ಲಿಯೂ ಸಾಧ್ಯವಾಗಲಿಲ್ಲ. ಈಗ ಕೆಲ ಕಾಲ ಹೀಗೆಯೇ ಕಳೆಯಲಿ. ಅವಳು ತಬ್ಬಲಿಯಾಗಿ ಬಂದವಳು. ತಾಯಿಯ ಮರಣದ ಚಿಂತೆಯಿಂದಾಗಿಯೇ ಸೊರಗಿ ಹೋಗಿದ್ದಾಳೆ. ಇನ್ನು ತನ್ನಿಂದಲಾಗಿ ನೊಂದುಕೊಳ್ಳಬಾರದು ಎಂದು ಬಗೆದನು.

ಸರಳೆಯ ಪ್ರಯಾಣ ಮತ್ತೆ ನಾಲ್ಕು ದಿನಗಳಲ್ಲಿ ನಿಶ್ಚಯವಾಯಿತು. ಅವಳು ನರ್ಸ್ ಶಿಕ್ಷಣ ಪಡೆಯಲು ಮದ್ರಾಸಿಗೆ ತೆರಳಲಿರುವ ಸಿದ್ಧತೆಯನ್ನು ಮಾಡತೊಡಗಿದಳು.

ರಮೇಶನು ಸರಳೆಯನ್ನು ಮದ್ರಾಸಿಗೆ ಕರೆದುಕೊಂಡು ಹೋಗಿ ಆಕೆಯನ್ನು ಅಲ್ಲಿ ಬಿಟ್ಟು ಬರುವ ವಿಚಾರವಾಗಿ ಚಿಂತಿಸಿದನು. ಅದಕ್ಕಾಗಿ ಎಲ್ಲರೂ ಹೊರಟರೆ ಮದ್ರಾಸಿಗೆ ಒಂದು ಪ್ರವಾಸವೂ ಆಯಿತು. ಅವಳನ್ನು ಬಿಟ್ಟು ಬಂದ ಹಾಗೆಯೂ ಆಯಿತು ಎಂದು ರಮೇಶನು ನಿಶ್ಚಯ ಮಾಡಿದನು. ಆದರೆ ಆಗತಾನೇ ಜ್ವರದಿಂದ ಗುಣವಾಗುತ್ತಿದ್ದ ಸುಮಿತ್ರೆ ಈ ಮಳೆಗಾಲದಲ್ಲಿ ಮದ್ರಾಸಿಗೆ ಪ್ರಯಾಣ ಬೆಳೆಸಲು ಒಪ್ಪಬಹುದೇ? ಎಂಬ ವಿಚಾರ ಅವನಿಗಂತೂ ಬಗೆ ಹರಿಯಲಿಲ್ಲ.

"ಜ್ವರ ಸಂಪೂರ್ಣ ಗುಣವಾದೊಡನೆ ಒಮ್ಮೆ ಹೋಗಿ ಬರಲಿ. ಅದರಿಂದ ಯಾವ ತೊಂದರೆಯೂ ಇಲ್ಲ. ಹವೆ ಬದಲಾವಣೆಯಾದಂತೆಯೂ ಆಗುತ್ತದೆ" ಎಂದು ಡಾಕ್ಟರರೂ ನುಡಿದಿದ್ದರು. ಆದುದರಿಂದ ರಮೇಶ ಹಾಗೆಯೇ ನಿಶ್ಚಯ ಮಾಡಿದನು. ಆದರೆ, ಸುಮಿತ್ರೆಗೆ ಈ ವಿಚಾರ ತಿಳಿಸಿದಾಗ ಆಕೆ "ನಾನಂತೂ ಬರುವುದೇ ಇಲ್ಲ. ನೀವೇ ಹೋಗಿ" ಎಂದು ಅವನು ಎಣಿಸಿದಂತೆಯೇ ನಿರ್ಧಾರವಾಗಿ ನುಡಿದು ಬಿಟ್ಟಳು.

ರಮೇಶ ಗೊಂದಲದಲ್ಲಿ ಬಿದ್ದನು. ಸುಮಿತ್ರೆ ತನ್ನ ಹಟವನ್ನು ಬಿಡಲಿಲ್ಲ. ಕೊನೆಗೆ ಸರಳೆ ಮತ್ತು ರಮೇಶ ಇಬ್ಬರೇ ಪ್ರಯಾಣ ಬೆಳೆಸಬೇಕಾಯಿತು. "ಜಾಗ್ರತೆಯಾಗಿ ನಾಲ್ಕೇ ದಿನಗಳಲ್ಲಿ ಬಂದುಬಿಡುತ್ತೇನೆ

ಸುಮಿತ್ರಾ!" ಎಂದು, ಹೊರಟು ನಿಂತ ರಮೇಶ ನುಡಿದಾಗ "ನಾಲ್ಕಲ್ಲ ಹತ್ತು ದಿನ ನಿಲ್ಲಿರಿ— ನನಗೇನು?" ಸುಮಿತ್ರೆ ತಟ್ಟನೇ ಉತ್ತರ ಕೊಟ್ಟಳು.

ಆ ಮಾತಿನ ವ್ಯಂಗ್ಯ ಸರಳೆ ರಮೇಶರಿಬ್ಬರ ಹೃದಯಕ್ಕೆ ಸೂಜಿ ನಾಟಿದಂತೆ ಆಯಿತು. ನಿಧಾನವಾಗಿ ಇಬ್ಬರೂ ಸುಮಿತ್ರೆಯ ಬಗ್ಗೆ ಚಿಂತಿಸುತ್ತಾ ಕಾರಿನಲ್ಲಿ ಕುಳಿತರು. ಕಾರಿನ ಬಾಗಿಲನ್ನು ಅವರು ಮುಚ್ಚಿಕೊಂಡಾಗ ಸುಮಿತ್ರೆಯೂ ತನ್ನ ಕೋಣೆಯ ಬಾಗಿಲನ್ನು ಸಿಟ್ಟಿನ ಭರದಲ್ಲಿ "ಢಬ್ಬೆಂ"ದು ಮುಚ್ಚಿಕೊಂಡಳು!

ಸುಮಿತ್ರಾ ತನ್ನ ಹಾಸಿಗೆಯಲ್ಲಿ ಮಲಗಿ ಬಿಕ್ಕಿಬಿಕ್ಕಿ ಅಳುತ್ತಿದ್ದಳು— ಆಕೆಯ ಮನಸ್ಸಿನಲ್ಲಿ ನಿಶ್ಚಯವಾಗಿತ್ತು ಅದು ರಮೇಶ—ಸರಳೆಯರ "ವಿಲಾಸ ಯಾತ್ರೆ"ಯೆಂದು! ತನ್ನ ಬಾಳಿನ "ವಿಷಮ ಯಾತ್ರೆ"ಯೆಂದು!

## ೮

"ಸರಳಾ! ನೀನು ಇಂದಿನ ವರೆಗೆ ಹಳ್ಳಿಯ ಹುಡುಗಿಯಾಗಿದ್ದೆ. ಇನ್ನು ಹಾಗಲ್ಲ. ಪೇಟೆಯಲ್ಲಿ ಬೆಳೆದು ಪೇಟೆಯವಳಾಗುವೆ. ಕಲಿತು ಉದ್ಯೋಗ ಸಂಪಾದಿಸಿ ಸ್ವತಂತ್ರಳಾಗುವೆ. ಜನತೆಯ ಸೇವೆ ಮಾಡುವೆ. ಕೀರ್ತಿ ಗಳಿಸುವೆ........ಆಗ ಈ ರಮೇಶನನ್ನು ಮರೆಯಬೇಡ" ಎಂದು ವಿರಹವ್ಯಥೆಯಿಂದ ಬಳಲಿ ರಮೇಶ ನುಡಿದನು.

ಫಕ್ಕನೆ ಸರಳೆಗೇನು ತೋರಿತೋ! ವಿರಹವ್ಯಥೆಯ ಅನುತಾಪದಿಂದ ಸ್ಫೂರ್ತಿ ಬಂದಂತಾಗಿ, ರಮೇಶನ ಎರಡೂ ಕೈಗಳನ್ನು ತನ್ನ ಕೈಗಳಲ್ಲಿ ಹಿಡಿದು ಅಶ್ರುತುಂಬಿದ ಕಣ್ಣುಗಳಲ್ಲಿ ನೋಡುತ್ತಾ ಗದ್ಗದ ಸ್ವರದಲ್ಲಿ "ಮರೆಯುವವಳು ನಾನಲ್ಲ ರಮೇಶ........ನೀನು ನನ್ನವನೇ ಅಲ್ಲವೇ?" ಎಂದು ಉತ್ತರಕೊಟ್ಟಳು. ಸರಳೆ ಲತೆಯಂತೆ ರಮೇಶನ ದೇಹವೃಕ್ಷವನ್ನು ತನ್ನ ಕೈಗಳಿಂದ ಬಳಸಿದಳು. ಆಕೆಯ ದೇಹ ಅಂದು ಕಂಪಿಸತೊಡಗಿತು. ಆಕೆಯ ಮುಖವನ್ನು ಎತ್ತಿ ರಮೇಶ ಆಕೆಯ ಕಣ್ಣುಗಳನ್ನು ದೃಷ್ಟಿಸತೊಡಗಿದನು. ಆದರೆ ಅವರ ಪ್ರೇಮಮಿಲನಕ್ಕೆ ಯಾವುದೊ ಅಡ್ಡಿಯು ಕಾಯುತ್ತಾ ಕಾಡಿಸುವಂತೆ ಕಾಣತೊಡಗಿತು. ರಮೇಶನ ದೃಷ್ಟಿಯಲ್ಲಿ ಅನೇಕ ಚಿತ್ರಗಳು ಚಲಿಸಲಾರಂಭಿಸಿದವು.

"ನೀನು ನನ್ನವನೇ ಅಲ್ಲವೇ?" ಎಂಬ ಸರಳೆಯ ಪ್ರಶ್ನೆಗೆ ಏನು ಉತ್ತರ ಕೊಡಬೇಕೆಂದು ತೋರಲಿಲ್ಲ ರಮೇಶನಿಗೆ.

ಸುಮಿತ್ರೆಯ ಆ ರೋಷ ಮೂರ್ತಿ ರಮೇಶನೆದುರು ನಿಂತು ಪ್ರಶ್ನಿಸುತ್ತಿತ್ತು—"ಈಕೆಯನ್ನು ವಿವಾಹಮಾಡಿಕೊಂಡಾಗ ನನಗೇಕೆ ತಿಳಿಸಲಿಲ್ಲ?"

"ತಪ್ಪಾಯಿತು ಸುಮಿತ್ರಾ....ಕ್ಷಮಿಸು...." ಎಂದು ತಡಪರಿಸಿ ನುಡಿಯುತ್ತಿದ್ದನು.

ಸರಳೆಗೂ ಆ ಸಮಯದಲ್ಲಿ ಮನಸ್ಸಿಗೆ ಹಿಂದಿನ ನೋಟಗಳ ಅರಿವಾಗತೊಡಗಿತು. ಸುಧಾಕರನ ನೆನಪು ಹೃದಯದಲ್ಲಿ ಮೂಡಿಬಂತು. "ಸರಳಾ! ನಾನು ನನ್ನೆದೆಯಲ್ಲಿ ತುಂಬಿದ ಪ್ರೇಮದ ಅಧಿಕಾರದಿಂದ ವಿನಂತಿಸಿಕೊಳ್ಳುತ್ತಿದ್ದೇನೆ. ನೀನು ಜನ್ಮತಃ ನನ್ನವಳಾಗಬೇಕಾದವಳು. ನನ್ನ ಬಾಳ ಗೆಳತಿಯಾಗುವೆಯಾ? ನಾನು ಬಡವನು ನಿಜ........" ಎಂದ ಸುಧಾಕರನ ದೀನತೆಯ ನುಡಿ ಸರಳೆಯ ಹೃದಯದಲ್ಲಿ ಚೇಳು ಕುಟುಕಿದಂತೆ ಕುಟುಕತೊಡಗಿತು. ತಕ್ಷಣ ರಮೇಶನನ್ನು ಬಿಟ್ಟು ದೂರಸರಿದಳು. ಬೆದರಿದ ಜಿಂಕೆಯಂತೆ ಆಕೆ ಕಾಣುತ್ತಿದ್ದಳು. ಮುಖ ಕೆಂಪೇರಿತ್ತು. ಕಣ್ಣುಗಳು ಅಗಲವಾಗಿದ್ದುವು........

ಗಂಟೆ ನಾಲ್ಕು ಹೊಡೆಯಿತು. ಸರಳೆ ಬೇಗನೆ ವಿವೇಕ ತಂದುಕೊಂಡು ನುಡಿದಳು—"ತಡವಾಯಿತು ರಮೇಶಣ್ಣಾ ರೈಲಿಗೆ; ಗಂಟೆ ನಾಲ್ಕಾಯಿತು."

"ಹೋಗುತ್ತೇನೆ........ಹೋಗುತ್ತೇನೆ........" ಎನ್ನುತ್ತಾ ರಮೇಶ ಕೋಣೆಯ ಬಾಗಿಲು ದಾಟಿದ, ಬೀದಿಗಿಳಿದ, ಮತ್ತೆ ಕಾಣದಾದ.

ರಮೇಶನಂತೂ ಹುಚ್ಚನಂತಾಗಿದ್ದ. ರೈಲಿನಲ್ಲಿ ಕುಳಿತುಕೊಂಡು ಪ್ರಯಾಣ ಮಾಡುವಾಗಲೂ ಇಡೀ ದಿನ ಸುಮಿತ್ರೆಯ ಚಿತ್ರ ಒಂದೆಡೆ ಚಲಿಸುತ್ತಿತ್ತು. ಸರಳೆಯ ಕಮಲದ ಕಣ್ಣು ಕರೆಯನ್ನೀಯುತ್ತಿತ್ತು. ಅಂತೂ ಅಂದು ಸರಳೆಯು ತೋರಿದ ಭಾವ ಕಣ್ಣಿಗೆ ಕಟ್ಟಿದಂತಿತ್ತು. ಅದರರ್ಥವೇನು? ಅಂತೂ ಪ್ರಯಾಣ ಮುಗಿಸಿ ರಮೇಶ ಮಂಗಳೂರಿಗೆ ಸೇರಿ ತನ್ನ ಮನೆ ಮುಟ್ಟಿದಾಗ ಅವನ ಮುಖ ಸಪ್ಪೆಯಾಗಿ ಬಣ್ಣಗೆಟ್ಟಿತ್ತು.

"ಆಕೆಯನ್ನು ಅಲ್ಲಿಯೇ ಬಿಟ್ಟು ಬಂದಿರಾ?" ಎಂದು ಸುಮಿತ್ರೆ ನುಡಿದಾಗ ಮಾತ್ರ ಅವನಿಗೆ ಎಚ್ಚರವಾಯಿತು. ಹೇಗೆ ದಾರಿ ಕಳೆದೆನೆಂಬುದೇ ಅವನಿಗೆ ಆಶ್ಚರ್ಯವಾಗಿತ್ತು. ಆ ಮಾತಿನ ಅರ್ಥ ಮಾಡಿಕೊಳ್ಳುವಷ್ಟು ಚೈತನ್ಯ ರಮೇಶನಲ್ಲಿ ಉಳಿದಿರಲಿಲ್ಲ. "ಹೂ....ಹೂ...." ಎನ್ನುತ್ತಾ ಆತ ತನ್ನ ಕೋಣೆ ಸೇರಿದನು. ಅಷ್ಟೂ ಬಳಲಿದ್ದನು ರಮೇಶ.

ಸುಮಿತ್ರೆ ಸಂಶಯಯುತ ದೃಷ್ಟಿಯಿಂದ ರಮೇಶನನ್ನು ದೃಷ್ಟಿಸುತ್ತಿದ್ದಳು. ರಮೇಶ ಕುರ್ಚಿಯಲ್ಲಿ ಕುಳಿತುಕೊಂಡಿದ್ದ. ಸುಮಿತ್ರೆ ಆತನ ಕಾಲಿನ ಬುಡದಲ್ಲಿ ಕುಳಿತು ಆತನ ಬೂಟ್ಸಿನ ದಾರವನ್ನು ಬಿಚ್ಚತೊಡಗಿದಳು.

ರಮೇಶನ ಕಣ್ಣೆದುರು ಮತ್ತೂ ಮತ್ತೂ ಸರಳೆಯ ಮೂರ್ತಿ ಸುಳಿಯುತ್ತಿತ್ತು. ಅವನಿಗೆ ತೋರಿತು — "ನಮ್ಮಿಬ್ಬರ ಮಿಲನಕ್ಕೆ ಈ ಸುಮಿತ್ರೆಯಲ್ಲವೇ ಅಡ್ಡಿ ಎಂದು...." ತನ್ನ ಯೋಚನೆಗೆ ತನಗೆ ನಗುಬಂತು. ರಮೇಶನಿಗೆ. ಈ ಪ್ರೇಮಪುತ್ತಳಿಯ ಮೇಲೇಕೆ ಈ ಆಗ್ರಹ, ಕೇವಲ ಆ ಸರಳೆಗಾಗಿ? ಸರಳೆಯಂತೂ ರೂಪವತಿ ನಿಜ. ಆದರೆ, ಸುಮಿತ್ರೆಗೆ ಅಂತಹ ರೂಪವಿಲ್ಲದಿದ್ದುದು ಯಾರ ತಪ್ಪು? ಆಕೆಯದೋ? ಸರಳೆಯದೋ? ಆ ದೇವರದಲ್ಲವೇ? ಸುಮಿತ್ರೆ ಕುರೂಪಿಯಾದರೂ ಆಕೆಯ ಪ್ರೇಮ ತನ್ನ ಮೇಲೆಷ್ಟು?" ಎಂದು ಸಂತಸಪಟ್ಟನು. ಆಕೆಯಂತೂ ಅದೇ ರೀತಿಯಲ್ಲಿ ತನ್ನ ಪ್ರೇಮದಿಂದ ರಮೇಶನ ಹೃದಯವನ್ನೇ ಗೆದ್ದಿದ್ದಳು. ಅಂತರಂಗದಲ್ಲಿ ಈ ಸುಮಿತ್ರೆಗಾಗಿ ಅಲ್ಲ — ಅವಳ ಪ್ರೇಮದ ಕಾಂಕ್ಷೆಯಿಂದ ರಮೇಶ ಎಷ್ಟು ಹೆದರುತ್ತಿದ್ದ!

ಪ್ರೇಮದೆದುರು ರೂಪಕ್ಕೆ ಯಾವ ಪ್ರಾಧಾನ್ಯ? ಪ್ರೇಮ ಮೊಳೆಯಲು ರೂಪ ಮುಖ್ಯ ಸಹಾಯಕ ನಿಜ. ಆದರೆ ಪ್ರೇಮಲತೆ ಮೊಳೆತು ಹೂ ಬಿಟ್ಟ ಮೇಲೆ........?

"ರೂಪ ಕ್ಷಣಿಕ; ಪ್ರೇಮ ಅಮರ" ಎಂದು ತೋರಿತು ರಮೇಶನಿಗೆ. ತನ್ನಿಂದ ತಾನೇ ಅವನ ಕೈ ಕಾಲಬುಡದಲ್ಲಿ ಕುಳಿತಿದ್ದ ಸುಮಿತ್ರೆಯ ತಲೆಯನ್ನು ನೇವರಿಸತೊಡಗಿತು.

ಕ್ಷಣಕ್ಷಣವೂ ಬಂದು ಕಾಡುವ ಸರಳೆಯ ನೆನಪಿನಿಂದ ತನ್ನ ಅಂತ
ರಂಗವನ್ನು ರಕ್ಷಿಸಿಕೊಳ್ಳಲು ರಮೇಶ ಸುಮಿತ್ರೆಯ ಪ್ರೇಮಕ್ಕೆ ಶರಣು
ಹೋದನು. ಆಕೆಯ ಪ್ರೇಮಲತೆಯ ಹಂದರದ ಬುಡದಲ್ಲಿ ಆತನ ಆತ್ಮ
ಶಾಂತಿ ಪಡೆಯಿತು.

ಆ ಪ್ರೇಮಾನುಭವ ನಿರಂತರವಾಗಿರಲಿ ಎಂದು ಅವನ ಆತ್ಮ ದೇವ
ರಲ್ಲಿ ಮೊರೆಯಿಡುತ್ತಿತ್ತು.

ಪ್ರೇಮಸಮಾಧಿಯಲ್ಲಿ ನಿಮಗ್ನರಾದ ರಮೇಶ ಸುಮಿತ್ರೆಯರ
ಹೃದಯಗಳೆರಡೂ ಒಂದಾಗಿ ಅತುಳ ಆನಂದವನ್ನು ವ್ಯಕ್ತಪಡಿಸುತಿದ್ದುವು.
ಅದೇ ಸಮಯದಲ್ಲಿ ಹೊರಗನಿಂದ ಯಾರೋ ದೀನ ಧ್ವನಿಯಲ್ಲಿ
“ಸ್ವಾಮೀ....ಸ್ವಾಮೀ....” ಎಂದು ಕರೆಯತೊಡಗಿದರು. ಪ್ರೇಮದ ಕನಸಿ
ನಲ್ಲಿದ್ದ ರಮೇಶನಿಗೆ ಮೊದಮೊದಲು ಇದರ ಅರಿವು ಬರಲಿಲ್ಲ. ಆದರೆ
ಕ್ರಮೇಣ ಕರೆವ ಸ್ವರ ಏರುತ್ತಿತ್ತು. “ಸ್ವಾಮೀ....ಸ್ವಾಮೀ........
ಸ್ವಾಮೀ ..........”

ಹೊರಗೆ ದೀನಸ್ವರದಿಂದ ಯಾರೋ ಕರೆಯುತ್ತಿದ್ದರು. “ಯಾರೋ
ಭಿಕ್ಷುಕರಿರಬಹುದು — ಎಂತಹಾ ತಂಟೆ ಇವರದು!” ಎಂದು ಅವನು
ಎಚ್ಚತ್ತ ನಂತರ ಅವನಿಗೆ ತೋರತೊಡಗಿತು.

ರಮೇಶ ಸುಮಿತ್ರೆಯನ್ನು ನೋಡಿದನು—ಆಕೆ ತನ್ನ ಕಾಲನ್ನು
ಹಾಗೆಯೇ ತಬ್ಬಿಕೊಂಡು ಅದರಲ್ಲಿ ತಲೆಯಿರಿಸಿಕೊಂಡಿದ್ದಾಳೆ—ತನ್ನ
ಹೃದಯಕುಸುಮದಲ್ಲಿ ಪ್ರೇಮಸೌರಭವನ್ನು ತುಂಬಿಸಿ ಪತಿಯ ಪಾದಕ್ಕೆ
ಅರ್ಪಿಸಿದ್ದಾಳೆ! ಎಂತಹ ರಸನಿಮಿಷ! ಅದನ್ನು ಈ ಭಿಕ್ಷುಕ ಬಂದು ಹೀಗೆ
ತನ್ನ ಅಪಸ್ವರದಿಂದ ಕೂಗಿ ಕೆಡಿಸಬೇಕೇ? ರಮೇಶನಿಗೆ ಕೋಪ ಉಕ್ಕಿ
ಬಂತು. ಮನೆಯ ಆವಾರದೊಳಗೆ ಆ ಭಿಕ್ಷುಕನನ್ನು ಬಿಟ್ಟವರಾರು?
ಮನೆಯ ಸೇವಕ ಎಲ್ಲಿ ಸತ್ತ? ಅವನಿಗೆ ಜೀವವಿಲ್ಲವೇ? ಎಂದೆಲ್ಲಾ
ಯೋಚಿಸಿಕೊಂಡನು ರಮೇಶ.

“ಸುಮಿತ್ರಾ....ಸುಮಿತ್ರಾ........” ಕೋಮಲ ಸ್ವರದಿಂದ ಕರೆದನು
ರಮೇಶ. ಸುಮಿತ್ರೆ ಎಚ್ಚತ್ತು ಗಡಿಬಿಡಿಯಿಂದ “ಏನು?” ಎಂದು ಕೇಳಿ
ದಳು. ರಮೇಶ ಹೇಳಿದನು—“ನೋಡು, ಅಲ್ಲಿ ಯಾವನೋ ಭಿಕ್ಷುಕ

ನಿರಬಹುದು. ಬಂದು ಕರೆಯುತ್ತಿದ್ದಾನೆ. ಅವನಿಗೆ ಏನಾದರೂ ಕೊಟ್ಟು ಕಳುಹಿಸಲು ಹೇಳು ಆ ಸೇವಕನೊಡನೆ."

"ಸೇವಕನೆಲ್ಲಿದ್ದಾನೆ? ನಾಲ್ಕು ದಿನಗಳ ಮೊದಲೇ ಕೆಲಸ ಬಿಟ್ಟು ಓಡಿದ್ದಾನೆ ಆತ" ಎಂದು ಸುಮಿತ್ರೆ ಹೊರನಡೆದಳು.

ಗಡ್ಡ ಬೆಳೆಸಿಕೊಂಡು, ಕೃಶನಾಗಿ, ಕೊಳಕು ಬಟ್ಟೆಗಳನ್ನು ಧರಿಸಿದ ಯುವಕನೊಬ್ಬನು ಮನೆಯ ಮುಂದೆ ನಿಂತಿದ್ದ. ಸುಮಿತ್ರೆಯನ್ನು ಕಂಡೊಡನೆಯೇ ಆತ—"ಅಮ್ಮಾ!" ಎಂದು ಕರೆದ.

ಸುಮಿತ್ರೆ ಆತನ ಮುಖವನ್ನು ದೃಷ್ಟಿಸಿ ನೋಡಿದಳು—ಬಡಕಲಾಗಿದ್ದರೂ ಆತನ ಮುಖದಲ್ಲಿ ಏನೋ ಕಳೆಯಿದೆ!

"ಏನು?" ಎಂದು ಕೇಳಿದಳು ಸುಮಿತ್ರೆ.

"ಅಮ್ಮಾ! ಬಡವ ನಾನು. ನಿಮ್ಮ ಮನೆಯಲ್ಲಿ ಏನಾದರೂ ಕೆಲಸ ವಿದ್ದರೆ........ಬದುಕಿಕೊಳ್ಳುವೆ" ಎಂದು ಅವನು ವಿನಂತಿಸಿದನು. ಅವನ ದೀನ ಬೇಡಿಕೆಯು ಅವಳ ಮನಸ್ಸನ್ನು ಕರಗಿಸಿತು.

"ನಿಲ್ಲು! ವಿಚಾರಿಸಿ ಹೇಳುತ್ತೇನೆ" ಎಂದು, ಒಳಬಂದು ಸುಮಿತ್ರೆ ರಮೇಶನೊಡನೆ ಹೇಳಿದಳು—"ಸೇವಕನು ಕೆಲಸ ಬಿಟ್ಟಿದ್ದಾನೆ ಎಂದೆನಲ್ಲಾ. ಹೊರಗೆ ಯಾವನೋ ಒಬ್ಬ ಕೆಲಸ ಹುಡುಕಿಕೊಂಡು ಬಂದಿದ್ದಾನೆ, ಯೋಗ್ಯನಂತೆ ಕಾಣುತ್ತಾನೆ. ನೋಡುತ್ತೀರಾ?"

"ಯೋಗ್ಯನಾದರೆ ಸರಿ ಇನ್ನೇನು?" ಎಂದನು ರಮೇಶ.

"ಅಲ್ಲ ನೀವೇ ನೋಡಬೇಕು."

"ಆಯಿತು" ಎಂದು ರಮೇಶ ಹೊರಬಂದನು.

ಮನೆಯ ಯಜಮಾನ ಹೊರಬರುವುದನ್ನು ಕಂಡು "ಸ್ವಾಮೀ!" ಎಂದು ಕರೆದನು ಆ ಮನುಷ್ಯ. "ಸ್ವಾಮೀ! ಬಡವ ನಾನು........ನಿಮ್ಮ ಮನೆಯಲ್ಲಿ ಏನಾದರೂ ಕೆಲಸ........" ರಾಗವೆಳೆದು ಹೇಳುತ್ತಿದ್ದಂತೆ ಅವನ ಬಾಯಿ ತಡೆಯಿತು. ಅವನಿಗೇನು ತೋರಿತೋ! ಕ್ಷಣಹೊತ್ತು. ಅನಂತರ ಅಲ್ಲಿ ನಿಲ್ಲದೆ ಮುಖ ಮುಚ್ಚಿಕೊಂಡು ಒಂದೇ ಸಮನೆ ಧೀರ ಗತಿಯಿಂದ ಹೊರಗೋಡಿ ಬಿಟ್ಟನು.

ರಮೇಶ ನೆಟ್ಟ ದೃಷ್ಟಿಯಿಂದ ಅವನನ್ನೇ ನೋಡುತ್ತಿದ್ದನು. ಫಕ್ಕನೆ ಅವನ ಬಾಯಿಯಿಂದ ಹೊರಬಿತ್ತು ಮಾತು. "ಆಹಾ! ಬಹಳ ಯೋಗ್ಯ ಮನುಷ್ಯ!"

"ಯೋಗ್ಯನೆಂದು ತಿಳಿದಿದ್ದೆ. ಅವನ ಮುಖದಲ್ಲಿ ಅಂತಹ ಕಳೆ ಯಿತ್ತು. ಆದರೆ ಆತ ಹುಚ್ಚ ಓಡಿದನಲ್ಲವೇ? ಓಡಲಿ! ಅಂತಹವರನ್ನು ಮನೆಯೊಳಕ್ಕೆ ಬರಬಿಟ್ಟರೆ ಅದಕ್ಕಿಂತಲೂ ದೊಡ್ಡ ಗಂಡಾಂತರ!" ಎಂದಳು ಸುಮಿತ್ರೆ.

ಅವನನ್ನು ಮನೆಯೊಳಕ್ಕೆ ಬರಬಿಟ್ಟರೆ ಗಂಡಾಂತರ ಉಂಟಾದೀತೇ ಇಲ್ಲವೇ ಎಂದೇ ರಮೇಶ ಯೋಚಿಸುತ್ತಿದ್ದ. ಫಕ್ಕನೆ ರಮೇಶನಿಗೆ ಏನೋ ತೋರಿತು. ಆತ ದನಿಯೆತ್ತಿ ಕರೆದ "ಸುಧಾಕರಾ! ಓ ಸುಧಾಕರಾ!"

ಆದರೆ ಸುಧಾಕರ ಓಡುತ್ತಾ ಆಗಲೇ ಕೂಗಳತೆ ದೂರವನ್ನುಪ ಕ್ರಮಿಸಿದ್ದ—ಎರಡು ಬೀದಿಗಳನ್ನು ದಾಟಿದ್ದ!

ಅಚ್ಚರಿಯಿಂದ ಸುಮಿತ್ರೆ ಕೇಳಿದಳು—"ಹಾಗಾದರೀತ ನಿಮಗೆ ಪರಿ ಚಿತನೇ?"

ಮೊದಲೊಮ್ಮೆ ಸರಳೆಯ ಗುಡಿಸಲನ್ನು ತಾನು ಪ್ರವೇಶಿಸುತ್ತಿದ್ದಾಗ "ನಾನು ಹೋಗುತ್ತೇನೆ" ಎನ್ನುತ್ತಾ ಸುಧಾಕರ ನಿಲ್ಲದೆ ಧೀರಗತಿಯಿಂದ ಓಡಿಹೋದ ಚಿತ್ರ ರಮೇಶನ ಕಣ್ಮುಂದೆ ಕುಣಿಯಿತು. ಅವನಿಗರಿಯು ದೆಯೇ ಒಂದು ಬಿಂದು ಕಣ್ಣೀರನ್ನು ರಮೇಶನ ಕಣ್ಣುಗಳು ಸುರಿಸಿದುವು. ಅದೇ ಸ್ಥಿತಿಯಲ್ಲಿಯೇ ರಮೇಶನು ಸುಮಿತ್ರೆಯ ಪ್ರಶ್ನೆಗೆ ಉತ್ತರವಿತ್ತನು. "ನಿರ್ಭಾಗ್ಯ! ಹೌದು........ನನಗೆ ಪರಿಚಿತನು........ಅಲ್ಲದೆ, ನನಗಿಂತಲೂ ಹೆಚ್ಚಾಗಿ ಸರಳೆಗೆ........"

೬

ಇಂದು ಸರಳೆಯ ವ್ಯಕ್ತಿತ್ವ ಅತೀಗಹನವಾಗತೊಡಗಿತು. ಅಂದಿನ ಬಡತನದ ಬಾಳಿನ ಚಿಂತೆ ನಂದಿ ಹೋಯಿತೋ ಎನ್ನುವ ರೀತಿಯಲ್ಲಿ ಮದ್ರಾಸಿನ ಮೆಡಿಕಲ್ ಕಾಲೇಜಿನ ವಿದ್ಯಾರ್ಥಿ ಭವನವೊಂದರಲ್ಲಿ ನಲಿ ಯುತ್ತಿದ್ದಳು. ಮಂಗಳೂರಿನ ಜೀವಿತದಲ್ಲಿ ಕಂಡ ನುಡಿ ಇಂದು ಬೇರೆ

ಯಾಗಿತ್ತು. ಅವಳು ಮಂಗಳೂರಿನ ರಮೇಶನ ಬಂಗಲೆಯ ಉಪ್ಪರಿಗೆ ಯಲ್ಲಿ ನಿಂತು "ಅಯ್ಯೋ ಸ್ವತಂತ್ರ ಸಂಪತ್ತಿಗೋಸ್ಕರ ಓಡಾಡುವ ಈ ಜನತೆಯಂತೆ ನನ್ನ ಬಾಳಿಲ್ಲವಲ್ಲಾ! ಕೇವಲ ಒಬ್ಬರ ಆಶ್ರಿತೆಯಾಗಿ ಬಾಳುವ ಬಾಳು ಒದಗಿ ಬಂತಲ್ಲವೇ?" ಎಂದು ಚಿಂತಿಸುತ್ತಾ ಇರುವ ಕಾಲ ಇಂದು ಬದಲಾಯಿತು.

ಅದರ ಬದಲು ಮದ್ರಾಸಿನ ವಿದ್ಯಾರ್ಥಿ ಭವನದ ಉಪ್ಪರಿಗೆಯಲ್ಲಿ ನಿಂತು "ಇಂದು ನಾನೂ ಸ್ವತಂತ್ರ ಬಾಳುವೆಗಾಗಿ ಜೀವ ಸವೆಯಿಸುವ ಒಂದು ವ್ಯಕ್ತಿ. ಇನ್ನು ಮುಂದೆ ನನ್ನ ಬಾಳು ನನ್ನ ಕಾಲ ಮೇಲೆ. ಯಾರ ಹಂಗೂ ನನ್ನನ್ನು ತಡೆಗಟ್ಟುವ ಹಾಗಿಲ್ಲವಲ್ಲಾ" ಎಂದು ಸಂತಸದಿಂದ ಓಲಾಡುತ್ತಿದ್ದಳು.

ದಿನಗಳ ಮೇಲೆ ದಿನಗಳುರುಳುತ್ತಿದ್ದುವು. ಹಾಗೆಯೇ ಸರಳೆಯ ಸ್ವಭಾವದಲ್ಲಿಯೂ ಎಷ್ಟೋ ಮಾರ್ಪಾಟುಗಳಾಗುತ್ತಲೇ ಇದ್ದುವು. ರಮೇಶನೆಂದಂತೆ ಈಗ ಆಕೆ ಹಳ್ಳಿಯ ಹುಡುಗಿಯಲ್ಲ; ಪೇಟೆಯ ನಾಗರಿಕಳು. ಪ್ರತಿದಿನವೂ ಆಕೆ ಆಸ್ಪತ್ರೆಯಲ್ಲಿ ಕಾಣುವ ಪ್ರಪಂಚ ಹಿರಿದು. ತರ ತರದ ರೋಗಿಗಳು ಅಲ್ಲಿಗೆ ಬಂದು ಉಪಚಾರ ಪಡೆಯುತ್ತಿದ್ದರು. ಆ ರೋಗಿಗಳ ಎಡೆಯಲ್ಲಿ ಪ್ರಪಂಚದ ಮಾನವತೆಯ ಸತ್ಯತೆಯನ್ನು ಸರಳೆಯು ಕಾಣತೊಡಗಿದ್ದಳು. "ಪ್ರಪಂಚವು ಕೇವಲ ಪ್ರೇಮ, ಸತ್ಯ, ವಿಶ್ವಾಸಗಳ ಅಧೀನವಾಗಿಲ್ಲ; ಪ್ರಪಂಚ ಮುಖ್ಯವಾಗಿ ಧನಾನುವರ್ತಿಯಾದುದು. ಅಂತಹ ಪ್ರಪಂಚದಲ್ಲಿ ದುಡ್ಡಿದ್ದವನೇ ದೊಡ್ಡಪ್ಪ; ಕಾಸಿಲ್ಲದವ ಕಲ್ಲಿಗೆ ಸಮಾನ" ಎಂಬ ಅನುಭವ ಆಕೆಗೆ ನಿತ್ಯನಿತ್ಯಕ್ಕೂ ಆಗತೊಡಗಿತ್ತು. "ಹಣ ವಂತರ ಒಲುಮೆಗಾಗಿ ಜನತೆ ಇಂದು ಅವರ ಕಡೆ ನೋಡುತ್ತಿದೆ. ಪ್ರೇಮಳ ಸ್ವಭಾವದವರ ಕಡೆಗಲ್ಲ; ಅಥವಾ ಸತ್ಯವಂತರ ಕಡೆಗಲ್ಲ" ಎಂದು ಆಕೆಗೆ ಮನವರಿಕೆಯಾಗತೊಡಗಿತ್ತು. "ಪ್ರಪಂಚದ ಒಲುಮೆ ಪಡೆಯ ಬೇಕಾದರೆ, ಸುಖವಾಗಿ ತಾನು ಉಳಿಯಬೇಕಾದರೆ ನಿತ್ಯಕ್ಕೂ ಹಣದ ಅಗತ್ಯ ಬೇಕು. ಹಣವಿಲ್ಲದಿದ್ದರೆ ಯಾವ ರೀತಿಯ ಪ್ರಯೋಜನವೂ ಇಲ್ಲ" ಎಂಬ ಭಾವನೆಯೂ ಮೂಡತೊಡಗಿತು.

ಸರಳೆ ಕಂಡುಂಡ ಈ ತತ್ವ ಅವಳ ಸ್ವಭಾವದಲ್ಲಿಯೂ ತೋರುತ್ತಾ ಬಂದಿತು. "ದರಿದ್ರನಾದ ಸುಧಾಕರ ಪ್ರಪಂಚದಲ್ಲಿ ಏನೊಂದೂ ಅಲ್ಲ—

ಜಮೀನ್ದಾರನಾದ ರಮೇಶ ಮಾತ್ರ ಈಗಿನ ಸಮಯದಲ್ಲಿ ಒಬ್ಬ
ಗಣ್ಯ ವ್ಯಕ್ತಿ; ಅವನನ್ನಾಶ್ರಯಿಸಿದರೆ ಮಾತ್ರ ಎಲ್ಲರಿಗೂ ಲಾಭವಿದೆ
ದರಿದ್ರನಾದವನನ್ನು ಕೇಳಿ ಕಾಡಿದರೆ ಏನು ತಾನೆ ಸಿಕ್ಕುವುದು?" ಎಂದ
ಸರಳೆ ಚಿಂತಿಸುತ್ತಿದ್ದಳು. ಪೇಟೆಯ ಕೃತಕ ವಾತಾವರಣದಲ್ಲಿ ಬೆಳೆಯ
ತೊಡಗಿದ ಸರಳೆಯ ಸ್ವಭಾವದ ಮೇಲೂ ಆ ಕೃತಕತೆಯು ಆವರಿಸುತ್ತಾ
ಬಂತು.

ಸರಳೆಯ ಈ ಭಾವನೆಯ ಸೋಗಿನಲ್ಲಿ, ಪ್ರೇಮಯಾಚನೆಗಾಗಿ
ದೀನತೆಯಲ್ಲಿ ಬೇಡಿದ, ಬಡತನದಲ್ಲಿ ಬಳಲಿದ ಸುಧಾಕರನ ನೆನಪೇ ಆಕೆ
ಯಿಂದ ಮರೆಸಿ ಹೋಗುವಂತಾಯಿತು. ಇಂದಾಕೆಗೆ ಸುಧಾಕರನನ್ನು
ತೋರಿಸಿ "ಈತ ನಿನಗೇನಾಗಬೇಕು?" ಎಂದು ಕೇಳಿದರೆ, "ನನಗೆ ಆತನ
ಪರಿಚಯವೇ ಇಲ್ಲ!" ಎನ್ನುವ ಮಟ್ಟಿಗೆ ಆಕೆಯ ಮನಸ್ಸು ಪರಿವರ್ತನೆ
ಯನ್ನು ಹೊಂದಿತ್ತು.

ಬಡ ಜನತೆಯ ಸೇವೆಗಾಗಿ ಹೊರಟವಳಾದರೂ ಸರಳೆಯ ಸ್ವಭಾವವು
ಧನಿಕ ರಮೇಶನ ಕಡೆಗೆ ಒಲಿಯಲಾರಂಭಿಸಿದ ತರುವಾಯ, ಕ್ರಮೇಣ
ಬಡವರನ್ನು ಸ್ವಲ್ಪ ತಿರಸ್ಕಾರದಿಂದ ಕಾಣುವ ಮಾರ್ಪಾಡಾಯಿತು.
ಆದರೂ, ರೋಗಿಗಳ ಕಷ್ಟ ಕಂಡು ಕರುಣೆಗೊಳ್ಳುವಷ್ಟು ಒಳ್ಳೆಯತನ
ಅವಳಲ್ಲಿ ಇನ್ನೂ ಉಳಿದಿತ್ತು. ಸ್ವತಂತ್ರ ಬಾಳುವೆಯ ಇಚ್ಛೆಯಂತೂ ಈ
ಮಧ್ಯೆ ಅವಳನ್ನು ಆವರಿಸಿತ್ತು. ಆದುದರಿಂದಲೇ ಆಕೆ ಉತ್ತಮ ನರ್ಸ್
ಆಗಿ ತಯಾರಾಗುತ್ತಿದ್ದಳು.

ಸರಳೆಯ ಸುಂದರವಾದ ಮುಖ, ಹಿತವಾದ ಮಾತುಗಳು, ಒಳ್ಳೆಯ
ಗುಣ ಎಲ್ಲವೂ ಸೇರಿ ಅವಳನ್ನು ಮೆಚ್ಚುಗೆಗೆ ಪಾತ್ರಮಾಡಿದ್ದುವು.
ಅದಕ್ಕಿಂತಲೂ ಹೆಚ್ಚಾಗಿ ಅವಳು ಶ್ರೀಮಂತಳಾದರೂ ಸೇವೆಗಾಗಿ ಬಂದವ
ಳೆಂದು ನೆನಸಿ ಎಲ್ಲರಿಗೂ ಆಕೆಯ ಮೇಲೆ ಪ್ರೀತಿಯುಂಟಾಗುತ್ತಿತ್ತು.
ಆಕೆಯಾದರೋ ಅವರೆಲ್ಲರಿಗೂ ಅಚ್ಚುಮೆಚ್ಚಿನ ಗೆಳತಿಯಾಗಿದ್ದಳು.

ಆಕೆ ಬಾಲ್ಯದಲ್ಲಿ ರೋಗಿಗಳು ಯಾತನೆಯಿಂದ ನರಳುವುದನ್ನು
ಕಂಡರೆ ಹೆದರಿಕೊಂಡು ಅವರ ಸ್ಥಿತಿಗಾಗಿ ಮರುಗಿ ಕಣ್ಣೀರು ಸುರಿಸು
ತ್ತಿದ್ದಳು. ಆದರೆ ಇಂದು ಅದೇ ಭಾವನೆ ಇದ್ದರೂ ತಾಯಿಯ ಭಾವನೆ
ಯಿಂದ, ಹೇಸದೆ ಅವರನ್ನು ಉಪಚರಿಸಲು ಆತುರಪಡುತ್ತಿದ್ದಳು.

ಸರಳೆಗೆ ಒಮ್ಮೊಮ್ಮೆ ತನ್ನನ್ನಗಲಿದ ತಾಯಿಯ ನೆನಪಾಗುತ್ತಿತ್ತು. ಅಂದಿನ ಅಸಹಾಯಕತೆಯನ್ನು ಚಿಂತಿಸಿ ದುಃಖಿಸುತ್ತಿದ್ದಳು. ಆ ತಾಯಿಯು ಇಂದು ಇದ್ದಳಾದರೆ ಅವಳನ್ನು ಬೇನೆಗೆ ತುತ್ತಾಗುವಂತೆ ಬಿಡುತ್ತಿರಲೇ ಇಲ್ಲ ಎಂದುಕೊಳ್ಳುವಳು. ಶುಶ್ರೂಷೆ ಮಾಡಿಯಾದರೂ ತಾನು ಅವಳನ್ನು ಉಳಿಸುತ್ತಿದ್ದೆ ಎಂಬ ಭಾವನೆಯೂ ಅವಳಲ್ಲಿ ಸುಳಿಯುತ್ತಿತ್ತು. ಅಂತೂ ಸರಳೆ ತನ್ನ ಜೀವನದಲ್ಲಿ ಕಷ್ಟ ಜೀವನದ ಎಣಿಕೆಯಲ್ಲಿ ಸುಖದ ದಿನಗಳನ್ನು ಉಣ್ಣುತ್ತಿದ್ದಳು.

ಒಂದು ದಿನ ಸರಳೆ ತನ್ನ ಕೋಣೆಯಲ್ಲಿ ಕುಳಿತು ಪುಸ್ತಕವನ್ನು ಹಿಡಿದು ಓದುತ್ತಾ ಇದ್ದಳು. ಆಕೆಯ ಮನಸ್ಸು ಪುಸ್ತಕದೊಡನೆ ತಲ್ಲೀನವಾಗಿತ್ತು. ಯಾರೋ ತಿಳಿಯದಂತೆ ಹಿಂದಿನಿಂದ ಬಂದು ಅವಳ ಕಣ್ಣುಗಳನ್ನು ಆಗ ಮುಚ್ಚಿದರು. ಅವಳು "ಯಾರು?" ಎಂದು ಕೇಳಿದಳು. ಆ ರಸಾಭಾವದಿಂದ ಆಕೆಯ ಮನಸ್ಸಂತೂ ರೋಸಿ ಹೋಯಿತು. ಆಕೆಗೆ ಗೊತ್ತು—ಕಣ್ಣನ್ನು ಮುಚ್ಚಿದವರು ತುಂಟತನದ ಗೆಳತಿ ಚಂದ್ರಳೆಂದು.

"ಚಂದ್ರಾ" ಎಂದು ಆಕೆಯ ಹೆಸರು ಕರೆದರೆ ಆಕೆ ಕಣ್ಣಿನಿಂದ ಕೈ ತೆಗೆಯುತ್ತಿದ್ದಳು. ಆದರೆ, ಬೇಕೆಂದೇ ಸರಳಾ ಚಂದ್ರಳ ತುಂಟತನಕ್ಕೆ ಪ್ರತಿಯಾಗಿ ತಾನೂ ತುಂಟತನ ಮಾಡಬೇಕೆಂದೆಣಿಸಿ ಸುಮ್ಮನೇ ಕುಳಿತು ಬಿಟ್ಟಳು—ಕಣ್ಣಿಗೆ ಕೈ ಹಿಡಿದೂ ಹಿಡಿದೂ ಬಳಲಿ ತಾನಾಗಿಯೇ ಚಂದ್ರಾ ಕೈ ಬಿಟ್ಟು ಬಿಟ್ಟರೆ ಆಗ ಗೆದ್ದವಳು ತಾನಲ್ಲವೇ? ಆದರೆ ಚಂದ್ರಾ ಬಲು ತುಂಟಿ. ಸರಳಾ ಮಾತಾಡದೇ ಕುಳಿತು ಬಿಟ್ಟಾಗ ಚಂದ್ರಾ ಮೆಲ್ಲನೆ ಬಾಗಿ ಆಕೆಯ ಕೆನ್ನೆಗೆ ತನ್ನ ತುಟಿಯೊತ್ತಿ ಮುತ್ತಿನ ಮಳೆಯನ್ನೇ ಕರೆದು ಬಿಟ್ಟಳು.

ಈ ಆಟದಿಂದ ಸರಳೆಯ ಅಭಿಮಾನ ಕರಗಿತು. ಸೋಲು ನಿಶ್ಚಯವಾಯಿತು. "ಛೇ!" ಎನ್ನುತ್ತಾ ಆಕೆ ಹಿಂದೆ ಕೈಚಾಚಿ ಚಂದ್ರಳ ಎರಡು ಕೈಗಳನ್ನು ಮೆಲ್ಲನೆ ಬಿಡಿಸಲಿಕ್ಕೆ ಪ್ರಯತ್ನಪಟ್ಟಳು.

ಚಂದ್ರಾ ನಕ್ಕು ಸರಳೆಯ ಕಣ್ಣಿನಿಂದ ತನ್ನ ಕೈ ತೆಗೆದಳು. ಚಂದ್ರಳ ಮುಖ ನೋಡಿ ಸರಳೆಗೂ ನಗುಬಂತು. "ಎಷ್ಟು ತುಂಟಿಯಾಗತೊಡಗಿರುವೆ ನೀನು ಚಂದ್ರಾ!" ಎಂದು ಸರಳಾ ನಗುತ್ತಾ ಕೇಳಿದಳು—

"ನನಗಲ್ಲ ಈ ಮಾತು ಅನ್ವಯಿಸುವುದು ನಿನ್ನ ಪ್ರಿಯಕರನಿಗೆ.
ಇವು—ಈ ಮುತ್ತುಗಳೂ ಆತನವು." ಎಂದು ಪುನಃ ಸರಳೆಯನ್ನು
ಚಂದ್ರಾ ಕೆರಳಿಸಿದಳು.

"ಒಳ್ಳೆಯುದನ್ನೇ ಕಲಿತೆ ನೀನು—ಇನ್ನು ಮದುವೆಮಾಡಿಕೊಳ್ಳುವು
ದೊಳ್ಳೆಯದು; ಇಲ್ಲವಾದರೆ ನಿನಗೇನಾದರೂ ಹುಚ್ಚುಹಿಡಿದೀತು" ಎಂದಳು
ಸರಳೆ.

"ಮದುವೆ ನನಗೋ ನಿನಗೋ? ನೋಡು ಇದೇ ಪತ್ರ-"ಎನ್ನುತ್ತಾ
ತುಟಿಕಚ್ಚಿಕೊಂಡಳು ಚಂದ್ರಾ.

ಸರಳೆಯ ಕುತೂಹಲ ಕೆರಳಿತು. "ಎಂತಹ ಪತ್ರವೇ ಅದು?"
ಸರಳೆ ಕೇಳಿದಳು.

"ನಿನ್ನ ಮದುವೆಯ ನಿಶ್ಚಿತಾರ್ಥದ ಪತ್ರ!"

"ನಿಶ್ಚಿತಾರ್ಥ........?"

"ಹೌದು. ನಿನ್ನ ಪ್ರಿಯಕರ ಸುಧಾಕರನೊಡನೆ." ಎನ್ನುತ್ತಾ ನಗ
ತೊಡಗಿದಳು ಚಂದ್ರಾ.

"ಸುಧಾಕರ! ಯಾವ ಸುಧಾಕರ?"

"ಮರೆತು ಬಿಟ್ಟೆಯಾ? ನಿನ್ನ ಮೇಲಣ ಪ್ರೇಮದಿಂದ ನಿನ್ನನ್ನು
ಹುಡುಕಿಕೊಂಡು ಅಲೆದೂ ಅಲೆದೂ ಹುಚ್ಚನಾದ ಸುಧಾಕರ!" ಎನ್ನುತ್ತಾ
ಚಂದ್ರಾ ನಗತೊಡಗಿದಳು.

ಸರಳೆಯ ಕುತೂಹಲ ಅಧಿಕವಾಯಿತು. "ಎಲ್ಲಿದೆ ಪತ್ರ? ಕೊಡು
—ನೋಡೋಣ!"

"ನಾನೇನು ಪೋಸ್ಟ್‌ಮೇನ್ ಎಂದು ತಿಳಿದೆಯಾ?"

ಚಂದ್ರಾ ಅಡಗಿಸಿದ ಪತ್ರವನ್ನು ಕಿತ್ತುಕೊಂಡು ನೋಡಿದಳು ಸರಳಾ.
ವಿಳಾಸ ಬರೆದಿದ್ದ ಅಕ್ಷರದಿಂದಲೇ ಗುರುತಿಸಿದಳು ಆಕೆ ಅದು ರಮೇಶನ
ಪತ್ರವೆಂದು.

"ಕವರನ್ನು ಒಡೆದು ಓದಿದೆಯಾ?" ಎಂದು ಸಿಟ್ಟಿನಿಂದ ಕೇಳಿದಳು.

"ಇಲ್ಲ—ಇಲ್ಲ. ನಾನೆಲ್ಲಿ ಓದಿದೆ?"

"ಮತ್ತೆ ಹೇಗೆ ನಿನಗೆ ಗೊತ್ತು ಅದರಲ್ಲಿ ಬರೆದ ಸಮಾಚಾರ?"

"ಒಡೆದು ಪತ್ರವನ್ನು ಓದದೆಯೇ ಅದರೊಳಗಿನ ವಿಷಯಗಳನ್ನು ತಿಳಿಯುವ ವಿದ್ಯೆ ನನಗೆ ತಿಳಿದಿದೆ."

"ನಿನ್ನ ತಲೆ!" ಎನ್ನುತ್ತಾ ಸರಳೆ ಪತ್ರವನ್ನು ತೆಗೆದು ಓದತೊಡಗಿದಳು. ಪತ್ರದಲ್ಲಿ ರಮೇಶ ಮದರಾಸಿನಿಂದ ಹೊರಟ ಮೇಲೆ ಪತ್ರ ಬರೆಯುವ ದಿನದ ವರೆಗೆ ನಡೆದ ಸಮಗ್ರ ಘಟನೆಗಳ ವಿವರಗಳೂ ಇದ್ದುವು. ಸುಧಾಕರನ ವಿಚಾರವೇ ಮುಖ್ಯವಾಗಿ ಅದರಲ್ಲಿ ವರ್ಣಿಸಲ್ಪಟ್ಟಿತ್ತು. ಆ ಕುರಿತು ಪತ್ರದಲ್ಲಿ ರಮೇಶ ಬರೆದಿದ್ದನು: "ಕೊಳಕು ವಸ್ತ್ರವನ್ನುಟ್ಟು ಕೂದಲು ಬೆಳೆಸಿಕೊಂಡು, ಕ್ಷೀಣ ಶರೀರಿಯಾಗಿ ಸುಧಾಕರ ಮನೆಗೆ ಕೆಲಸ ಕೇಳಲು ಬಂದ. ಆದರೆ ನನ್ನನ್ನು ಕಂಡೊಡನೆಯೇ ನನಗೆ ಗುರುತು ಸಿಗಬಾರದೆಂದು ಮುಖ ಮರೆ ಮಾಡಿಕೊಂಡು ಹುಚ್ಚನಂತೆ ಓಡಿದ.

ನಾನು ಆ ಕ್ಷಣ ಅವನನ್ನು ಹುಡುಕಲು ಪ್ರಯತ್ನಪಟ್ಟೆ. ಆದರೆ ಆಗ ಅತ ಓಡಿ ಎಲ್ಲಿಯೋ ಮರೆಯಾಗಿದ್ದ. ಈಗ ಆತನನ್ನು ಹುಡುಕುವ ಪ್ರಯತ್ನದಲ್ಲಿದ್ದೇನೆ. ಇದು ವರೆಗೂ ಸಿಕ್ಕಿಲ್ಲ. ಬಹುಶಃ ಈ ಮಂಗಳೂರನ್ನು ಬಿಟ್ಟಿದ್ದಾನೋ ಏನೋ!" ಇತ್ಯಾದಿಯಾಗಿ ಪತ್ರದುದ್ದಕ್ಕೂ ಬರೆದಿದ್ದ ರಮೇಶ. ಪತ್ರ ಓದಿ ಸರಳೆ ನಕ್ಕುಬಿಟ್ಟಳು. ನಕ್ಕ ಮುಖ ಮತ್ತೆ ಗಂಭೀರವಾಯಿತು. ಚಂದ್ರಳಿಗಂತೂ ಆಶ್ಚರ್ಯವಾಯಿತು—ಸರಳೆಯ ವರ್ತನೆಯನ್ನು ನೋಡಿ. ಸರಳೆಯು ಸುಧಾಕರನ ನೆನಪನ್ನು ಮಾಡತೊಡಗಿದಳು. ರಮೇಶನ ಸಿರಿಯನ್ನು ಎಣಿಸತೊಡಗಿದಳು. ಸಿರಿಯ ತೂಕವೇ ಅವಳಿಗೆ ಮಿಗಿಲಾಗಿ ಕಂಡುಬಂತು. ಹಾಗಾಗಿಯೇ ರಮೇಶನ ಹತ್ತಿರ ಕೆಲಸ ಕೇಳ ಬಂದ ಸುಧಾಕರನನ್ನು ಕಂಡು ಹೇಸಿದಳು. ಇದರಿಂದ ಒಲವಿನ ಬಳ್ಳಿ ರಮೇಶನನ್ನಾಶ್ರಯಿಸಲು ಇಚ್ಛಿಸಿತು. ಅದೂ ನಿರ್ಧಾರವಾದ ಹಾಗಾಯಿತು. ಚಂದ್ರಾ ಅವಳನ್ನು ಈ ಅವಸ್ಥೆಯಲ್ಲಿ ಮಾತಾಡಿಸಬಾರದೆಂದರಿತು ತನ್ನ ಕೋಣೆಗೆ ಹಿಂತಿರುಗಿದಳು.

ಅವಳ ಮನಸ್ಸಿನಲ್ಲಿ ಪ್ರಶ್ನೋತ್ತರಗಳ ಸುರಿಮಳೆಯಾಗತೊಡಗಿತು.

"ಯಾಕೆ ನಗುವಿ?"

"ಇದಾರು ಈ ಸುಧಾಕರ—ನನಗೇ ತಿಳಿಯದಾಗಿದೆ."

"ಪ್ರೇಮ ಭಿಕ್ಷೆ ಬೇಡಿದ ಸುಧಾಕರನನ್ನು ಮರೆತೆಯಾ? ಆ ಸುಧಾಕರ......."

"ಕೆಲಸ ಕೇಳ ಬಂದ ಕೂಲಿಕಾರ!"

"ಹಾಗಾದರೇನು? ಆತನ ಮೇಲೆ ನಿನಗೆ ಪ್ರೇಮವಿಲ್ಲವೇ?"

"ಇಲ್ಲ."

"ಮತ್ತೇನು? ಯಾರಾದರೊಬ್ಬನ ಸೊತ್ತಾಗಿ ಕೊಳೆಯಬೇಕೇ?"

"ಇಲ್ಲ, ಇಲ್ಲ ಯಾರ ಸೊತ್ತಾಗಲೂ ನನಗೆ ಇಚ್ಛೆಯಿಲ್ಲ. ದಾದಿಯಾಗಿ ಎಲ್ಲರ ಸೇವೆ ಮಾಡುವೆ; ದೇಶದ ಸೇವೆಗಾಗಿ ದುಡಿಯತೊಡಗುವೆ."

"ಹಾಗಾದರೆ ಏನಾದರೂ ಬರೆದು ಹಾಕು."....ಹೌದು ಬರೆಯಲೇ ಬೇಕೆನ್ನಿಸಿತು ಸರಳೆಗೆ. ಕಾಗದ ಲೇಖನಿ ಹಿಡಿದುಕೊಂಡು ರಮೇಶನಿಗೆ ಪತ್ರ ಬರೆಯಲು ತೊಡಗಿದಳು.

ಮದರಾಸು,

ರಮೇಶ, ........................

ನಿನ್ನ ಪತ್ರ ಓದಿ ಅಳಲೂ ಬೇಡ; ನಗಲೂ ಬೇಡ ಎಂದು ಆಜ್ಞಾಪಿಸಿರುವೆ. ಆದರೆ ನಾನು ನಿನ್ನ ಅಜ್ಞೆ ಮೀರಿ ನಕ್ಕೆನು—ನಕ್ಕು ಅಂತೆಯೇ ಮರಳಿ ದುಃಖಪಟ್ಟೆನು. ನನ್ನ ಪ್ರೇಮ ನೆಟ್ಟಿರುವುದು ಒಂದೇ ಕಡೆ. ಅದು ಯಾರಲ್ಲಿ ಎಂದು ನಿನಗೆ ತಿಳಿದಿದೆ. ನೀನು ನನ್ನನ್ನು ಇಲ್ಲಿ ಅಗಲುವಾಗ ನಡೆದ ಘಟನೆಯನ್ನು ನೆನೆದುಕೋ! ನೆನಪಿಲ್ಲವೇ? ಆ ಸವಿನೆನಪನ್ನು ಸವಿಯುತ್ತಲೇ ನಾನು ನಿನ್ನನ್ನು ಕಾಣದಿದ್ದರೂ ಇಲ್ಲಿ ದಿನಗಳನ್ನು ನೂಕುತ್ತಿದ್ದೇನೆ.

"ಒಮ್ಮೆ ಇಲ್ಲಿಗೆ ಬರಬಾರದೇ? ಅಲ್ಲಿಯೇ ಕುಳಿತು ನನ್ನನ್ನು ಮರೆತುಬಿಟ್ಟೆಯೋ ನೀನು?"

"ಇನ್ನೇನು ನನಗೂ ಇಲ್ಲಿ ಹೆಚ್ಚು ತಿಂಗಳೇನೂ ಇಲ್ಲ. ಇಲ್ಲಿ ಮುಗಿದೊಡನೇ ಓಡಿಬಂದು ಸೇರುವೆ."

ನಿನ್ನವಳಾದ,

"ಸರಳಾ"

ಪತ್ರವನ್ನು ಅನೇಕಬಾರಿ ಓದಿಕೊಂಡಳು ಸರಳಾ. ಸ್ಫೂರ್ತಿಯ ಭರದಲ್ಲಿ ತನ್ನ ಹೃದಯದ ಆಶೆಗಳನ್ನೆಲ್ಲಾ ಪತ್ರದಲ್ಲಿ ಮೂಡಿಸಿದ್ದಳು. ಇನ್ನೇನೂ ಹೆಚ್ಚು ಆ ಪತ್ರಕ್ಕೆ ಸೇರಿಸಬೇಕೆಂದು ಆಕೆಗೆ ತೋರಲಿಲ್ಲ. ಪತ್ರವನ್ನು ಕವರಿನೊಳಗೆ ತುರುಕಿ, ವಿಳಾಸ ಬರೆದು ಆಗಲೇ ಟಪ್ಪಾಲು ಪೆಟ್ಟಿಗೆಗೆ ಹಾಕಿಬಂದಳು ಸರಳೆ. ಅನಂತರ ಆವೇಶ ಅಳಿದ ಮೇಲೆ ಆ ಪತ್ರವನ್ನು ಟಪ್ಪಾಲು ಪೆಟ್ಟಿಗೆಯಲ್ಲಿ ಹಾಕಲು ತನಗೆ ಧೈರ್ಯ ಬರ ಲಾರದು ಎಂದು ಆಕೆಗೆ ಗೊತ್ತು!

ಆಕೆಯ ಹೃದಯದಲ್ಲಿ ರಮೇಶನ ಮೂರ್ತಿಯೇ ಕುಣಿಯತೊಡ ಗಿತು. ಸುಧಾಕರನ ವಿಷಯದಲ್ಲಿ ತಿರಸ್ಕಾರವಿಲ್ಲದಿದ್ದರೂ ಆತನ ಬಡ ತನದ ವಿಷಯದಲ್ಲಿ ಅವಳಿಗೆ ತಿರಸ್ಕಾರ ಮೂಡತೊಡಗಿತು.

೧೦

ಸುಮಿತ್ರೆ ಆ ಪತ್ರವನ್ನು ಹತ್ತನೇ ಬಾರಿ ಓದಿ ಮುಗಿಸಿದಳು. ಕಡೆಗೆ ಆಕೆಯ ಕಣ್ಣುಗಳು ಪತ್ರದ ಬುಡದಲ್ಲಿ ಬರೆದ "ನಿನ್ನವಳಾದ ಸರಳಾ" ಎಂಬ ಶಬ್ದಗಳ ಮೇಲೆ ನೆಟ್ಟು ನಿಂತುವು.

ಓದುತ್ತಾ ಓದುತ್ತಾ ಸುಮಿತ್ರೆಯ ಮೈ ಕಂಪಿಸತೊಡಗಿತು. "ಆಶ್ರಿತಳಾಗಿ ಮನೆಗೆ ಬಂದವಳೀಗ ಮನೆಯ ಒಡೆಯನಿಗೇ ಪ್ರೇಮಪತ್ರ ಬರೆಯತೊಡಗಿದಳೇ? ನನ್ನ ಸಂಸಾರದಲ್ಲಿ ವಿಷ ಹಿಂಡಲು ಈಕೆ ಯಾವ ಗಳಿಗೆಯಲ್ಲಿ ಮನೆಗೆ ಕಾಲಿಟ್ಟಳೋ!" ಎಂದು ಸುಮಿತ್ರೆಯ ಮನಸ್ಸು ಕೇಳತೊಡಗಿತು.

"ಆಕೆಯನ್ನು ಹೆಚ್ಚು ಕಾಲ ಮನೆಯಲ್ಲಿಟ್ಟುಕೊಳ್ಳುವುದು ಒಳ್ಳೆಯ ದಲ್ಲ—ಯಾರಿಗಾದರೂ ಮದುವೆ ಮಾಡಿಕೊಡುವ ಏರ್ಪಾಡು ಮಾಡಿರಿ" ಎಂದು ಆಕೆ ರಮೇಶನೊಡನೆ ಅನೇಕ ಸಲ ಹೇಳಿದ್ದಳು. ರಮೇಶ ಆಗ ಹೇಳಿದ್ದ—"ನೀನೇನೂ ಹೆದರಬೇಡ ಸುಮಿತ್ರಾ! ನಾನೂ ಅದೇ ಪ್ರಯತ್ನ ದಲ್ಲಿದ್ದೇನೆ. ಆದರೆ ಆಕೆಯನ್ನು ನಾನೇ ಮದುವೆಯಾದೇನು ಎಂದು ನೀನು ಹೆದರಿದೆಯಾ? ನಿಜವೇ! ನಿನ್ನಿಂದಲೂ ಆಕೆ ರೂಪವತಿ!" ಎಂದು

ಉತ್ತರ ಕೊಟ್ಟ ರಮೇಶ ಅಂದುದು ನಗೆಯ ಮಾತೆಂದು ತಿಳಿದಿದ್ದಳ
ಸುಮಿತ್ರೆ. ಆದರಿಂದು ಅದೇ ನಿಜವಾಗುವ ಸೂಚನೆ ತೋರುತ್ತಿದೆ!

ಸುಮಿತ್ರೆಯ ಮನದಲ್ಲಿ ಬಿರುಗಾಳಿ ಎದ್ದಿತ್ತು. "ತನ್ನ ಪತಿ ಹಾಗಾ
ದರೆ ತನ್ನ ಪ್ರೇಮವನ್ನು ಇನ್ನೊಬ್ಬಳಿಗೆ ಹಂಚುವನೇ?" ಎಂಬ ದುಃಖವನ್ನು
ಅಡಗಿಸಲು ಆಕೆಯ ಹೃದಯದಲ್ಲಿ ಎಡೆ ಹುಡುಕುವುದೇ ಕಷ್ಟವಾಗಿತ್ತು
ಆಕೆಯ ಎದೆ ಬಿರಿಯದೆ ಉಳಿದುದೇನೋ ಆಶ್ಚರ್ಯ!

"ಇರಲಾರದು. ನನ್ನ ಪತಿ ನನಗೆ ಕೇಡುಬಗೆಯಲಾರನು." ಎಂದು
ತನ್ನ ಉದ್ದೀಪ್ತ ಮನಕ್ಕೆ ಸಮಾಧಾನವನ್ನು ಉಸುರುವಳು ಆಕೆ. ಆದರೆ
ಅದರಿಂದ ಆಕೆಯ ತಪ್ತ ಅಂತರಂಗ ಸಮಾಧಾನ ತಾಳಲೊಲ್ಲದು! ಹೇಗೆ
ತಾನೇ ಸಮಾಧಾನಗೊಂಡೀತು? ಆಕೆಯ ಬಾಳ್ವೆ ಮುರಿದು ಮಣ್ಣು
ಗೂಡುವ ಸಂದರ್ಭವಲ್ಲವೇ ಅದು. ಪತ್ರದ ಪ್ರೇಮಕುಡಿಯೇ ಮನೆಯು
ಮಡಿಯಲು ಕಾರಣವಾಗಿದೆಯೆಂದರಿತವಳಾಗಿ!

ಈ ಪತ್ರಕ್ಕೆ ತನ್ನ ಪತಿಯು ಆಕೆಗೆ ಬರೆದ ಉತ್ತರವನ್ನು ನೋಡ
ಬೇಕು—ಇಲ್ಲವಾದರೆ ಅವರ ಮನಸ್ಸು ಹೇಗೆ ತಿಳಿದೀತು?" ಎಂದು
ಆಕೆಗೆ ತೋರಿತು. ಆದರೆ ಪತಿ ಬರೆದ ಪತ್ರ ಆಕೆಗೆ ಹೇಗೆ ಸಿಕ್ಕೀತು?
ಅದು ಆಗಲೇ ಸರಳೆಯ ಕೈ ಸೇರಿತ್ತು—ಮದರಾಸಿನಲ್ಲಿ!

ರಮೇಶನು ಸರಳೆಯನ್ನು ಮದರಾಸಿನಲ್ಲಿ ಬಿಟ್ಟು ಬರಲು ಹೋದಾ
ಗಲೇ ಸುಮಿತ್ರೆಯ ಸಂಶಯ ಬಲಗೊಂಡಿತ್ತು. ಈಗ ಅದು ನಿಜವಾ
ಯಿತು! ಆಕೆಯ ದೌರ್ಭಾಗ್ಯ! "ಇರಲಿ, ನೋಡಿಕೊಳ್ಳುತ್ತೇನೆ. ನನ್ನ
ನಿಷ್ಕಲ್ಮಷ ಪ್ರೇಮಕ್ಕೆ ಯೋಗ್ಯ ಪುರಸ್ಕಾರ ತನ್ನ ಪತಿಯಿಂದ ತನಗೆ
ದೊರಕುವುದೋ ಇಲ್ಲವೋ ಎಂದು" ತನ್ನ ಮನವನ್ನು ಗಟ್ಟಿಮಾಡಿ
ಕೊಂಡಳು ಸುಮಿತ್ರೆ.

"ಇರಲಿ ಈ ಪತ್ರ—ಎಂದಾದರೂ ಪ್ರಯೋಜನಕ್ಕೆ ಬಿದ್ದೀತು."
ಎಂದು ಭದ್ರವಾಗಿ ಅದನ್ನು ತೆಗೆದಿರಿಸಿದಳು. "ಇವರ ನಡೆನುಡಿಯನ್ನು
ಇನ್ನು ಸರಿಯಾಗಿ ಪರೀಕ್ಷಿಸಬೇಕು." ಎಂದು ನಿರ್ಧರಿಸಿದಳು ಸುಮಿತ್ರೆ.

ಆಕೆಯ ಮನಸ್ಸು ಕೇಳುತ್ತಿತ್ತು—"ಪ್ರೇಮಕ್ಕೋ ಇವರ ಪುರ
ಸ್ಕಾರ—ಅಲ್ಲ, ರೂಪಕ್ಕೋ?"

ಅದೇ ವೇಳೆಯಲ್ಲಿಯೇ ಸರಳೆ ಮದ್ರಾಸಿನಲ್ಲಿ ತನ್ನ ಕೋಣೆಯಲ್ಲಿ ಆರಾಮಾಸನದ ಮೇಲೆ ಒರಗಿಕೊಂಡು ಪತ್ರವನ್ನೋದುವುದರಲ್ಲಿ ನಿರತಳಾಗಿದ್ದಳು.

ಮಂಗಳೂರು,

.........................

ಪ್ರಿಯ ಸರಳಾ,

"ನೀನಿನ್ನು ಹಳ್ಳಿಯ ಹುಡುಗಿಯಲ್ಲ—ಪೇಟೆಯ ನಾಗರಿಕ ಯುವತಿ. 'ನನ್ನನ್ನು ಮರೆಯಬೇಡ' ಎಂದು ನಾನಂದು ಅಗಲುವಾಗ ನುಡಿದುದು ನೆನಪಿದೆಯೇ? ನಿಜ. ನೀನಿನ್ನು ಪೇಟೆಯ ನವಯುವತಿ

"ಇಂದಿನ ವರೆಗೂ ನಿನ್ನ ವಿವಾಹವನ್ನು ಇತರರೊಡನೆ ನೆರವೇರಿಸಿ ನಿನಗೊಂದು ಯೋಗ್ಯ ಮನೆ ಕಲ್ಪಿಸಿ ಕೊಡಬೇಕೆಂದು ಇಚ್ಛಿಸಿದ್ದೆ. ಅದಕ್ಕಾಗಿಯೇ ಸುಧಾಕರನ ವಿಷಯ ನಿನಗೆ ಬರೆದಿದ್ದೆ. ಆದರೆ, ನಿನಗೆ ಅವನಲ್ಲಿ ಪ್ರೇಮವಿಲ್ಲವೆಂದು ಈಗ ತಿಳಿದೆ. ಕುಸುಮಳ್ಳಿಯಲ್ಲಿ ನಡೆದ ಘಟನೆಗಳಿಂದ ನಿನಗೆ ಅವನಲ್ಲಿ ಪ್ರೇಮ ಮೂಡಿರಬೇಕೆಂದು ಎಣಿಸಿದ್ದೆ. ಕ್ಷಮಿಸು ತಪ್ಪಾಯಿತು!

"ನೀನಿನ್ನು ಸ್ವತಂತ್ರಳು. ನಿನ್ನ ಪ್ರೇಮವನ್ನು ನಿನ್ನ ಮನಸ್ಸೊಲಿದವನಿಗೆ ಅರ್ಪಿಸಬಹುದು; ಅಥವಾ ಅವನಿಂದ ಸ್ವೀಕರಿಸಬಹುದು.

"ಹೆಚ್ಚಿಗೇನು ಬರೆಯಲಿ? ಪ್ರೇಮವೆಂದರೆ ದೇವರು. ದೇವರು ಕುಣಿಸಿದಂತೆ ಕುಣಿಯೋಣ.

"ನಿನಗೆ ಅಲ್ಲಿಂದ ಬಿಡುಗಡೆಯಾದೊಡನೆಯೇ ತಡಮಾಡದೇ ಬಾ! ನಿನಗಾಗಿ ಕಾಯುತ್ತಿರುವೆ.

ನಿನ್ನವನಾದ,

"ರಮೇಶ"

ಪತ್ರವನ್ನು ಅನೇಕ ಬಾರಿ ಓದಿ ತೃಪ್ತಳಾಗಿ "ನನ್ನ ರಮೇಶ!" ಎನ್ನುತ್ತಾ ಅದನ್ನು ಎದೆಗೊತ್ತಿಕೊಂಡಳು—ಸರಳೆ. ಆಕೆಯೆದೆಯಲ್ಲಿ ಮಂಗಳೂರಿಗೆ ಹೋಗುವ, ರಮೇಶನನ್ನು ಕಾಣುವ, ಆಶೆ ತಾಂಡವ ವಾಡುತ್ತಿತ್ತು.

ಸೂರ್ಯನು ಪಡು ಗಡಲಿನಲ್ಲಿ ಮುಳುಗುತ್ತಿದ್ದನು. ಜಗತ್ತನ್ನು ಮೆಲ್ಲಮೆಲ್ಲನೆ ಕತ್ತಲು ಆವರಿಸುತ್ತಿತ್ತು. ಹಕ್ಕಿಗಳು ಆಲಾಪನೆ ಮಾಡುತ್ತಾ ಬೀಡು ಸೇರುತ್ತಿದ್ದುವು. ಹಾಗೆಯೇ ಸರಳೆಯ ಎದೆಯಲ್ಲಿಯೂ ರಮೇಶನ ಪ್ರೇಮವಾಣಿ ಮೊರೆಯುತ್ತಿತ್ತು. ತನ್ನ ಅವನ ಪ್ರೇಮವನ್ನುಳಿದು ಉಳಿದ ಜಗತ್ತೆಲ್ಲವೂ ಅಂಧಕಾರದಲ್ಲಿ ಲೀನವಾದಂತೆ ತೋರುತ್ತಿತ್ತು!

ದೂರದಲ್ಲಿ ರೇಡಿಯೋ ಹಾಡುತ್ತಿತ್ತು—"ಪ್ರೇಮಮಯವೀ ಭೂಮಿ ........" ಅದಕ್ಕೆ ಸರಿಯಾಗಿ ಸರಳೆಯ ಹೃದಯದ ತಾಳವೂ ಶಬ್ದಮಾಡ ತೊಡಗಿತು.

೧೧

ಸುಮಿತ್ರೆಗೆ ಸೌಭಾಗ್ಯವೆಷ್ಟಿದ್ದರೂ ಪತಿಯ ಪರಿಸ್ಥಿತಿಯನ್ನು ಪರ್ಯಾಲೋಚಿಸಿ ಧೃತಿಗೆಟ್ಟು ಪವಡಿಸಿದ್ದಳು. ಸರಳೆಯ ಬಗ್ಗೆ ಮಾತುಮಾತಿಗೂ ತನ್ನ ಪತಿ ತೋರಿಸುತ್ತಿದ್ದ ಆದರ, ಅವಳ ಮೇಲಿನ ನೆನಪು ಇವೆಲ್ಲವೂ ಅವಳನ್ನು ದುಃಖಕ್ಕೀಡು ಮಾಡಿದ್ದವು. "ಎಷ್ಟು ಐಶ್ವರ್ಯವಿದ್ದರೇನು? ಮನಸ್ಸಿಗೆ ಶಾಂತಿ ಬೇಕು. ಕೇವಲ ಶಾಂತಿಯಿಲ್ಲದ ಈ ಸಂಸಾರ ಯಾರಿಗೆ ತಾನೇ ಬೇಕು" ಎಂದು ನಿರಾಶೆಯ ಭಾವನೆಯನ್ನು ಅವಳ ಮುಖವು ವ್ಯಕ್ತಪಡಿಸುತ್ತಿದ್ದಿತು. ತಾನು ಅಗ್ನಿ ಸಾಕ್ಷಿಯಾಗಿ ವಿವಾಹ ಮಾಡಿಕೊಂಡ ಪತಿಯ ಸೇವೆಮಾಡಲು ನಿರಂತರ ಆಸೆಪಟ್ಟರೂ ಅವರ ಮನಸ್ಸು ಸರಳೆಯ ಮೇಲೆಯೇ ಆಯಿತಲ್ಲಾ ಎಂಬ ಬೇಸರದಿಂದ ಮಂಚದ ಮೇಲೆ ಹೊರಳಾಡುತ್ತಿದ್ದಳು.

"ರಮೇಶಾ, ರಮೇಶಾ."

ಈ ಶಬ್ದವಂತೂ ಕೇಳತೊಡಗಿತು. ಆದರೆ ಮನಸ್ಸು ಉದಾಸೀನ ಮಾಡತೊಡಗಿತು.

"ರಮೇಶಾ!!"

"ಯಾರದು!" ಎಂಬ ಅಧಿಕಾರವಾಣಿಯು ಮನೆಯೊಡತಿಯಿಂದ ತಕ್ಷಣ ಹೊರಟಿತು. ಆದರೂ ತನ್ನ ಪತಿಯನ್ನು ಹೀಗೆ ಸಂಭೋದಿಸುವ

ಯುವತಿಯ ಧ್ವನಿ ಯಾರದಾಗಿರಬಹುದು ಎಂಬ ಯೋಚನೆ ಬಂದ ಮೇಲೆ ಮಂಚದಿಂದಿಳಿದು ಹೊರಗೆ ಬಂದು ನೋಡುವುದೇನು? ಇಷ್ಟರ ವರೆಗೆ ಯಾರ ವಿಷಯವಾಗಿ ಅವಳು ಚಿಂತಿಸುತ್ತಿದ್ದಳೋ ಆ ಸರಳೆಯೇ ಅಲ್ಲಿದ್ದಳು. ಸರಳೆಯ ಮುಖ ನೋಡಿ ಅವಳ ಬಗ್ಗೆ ತಿರಸ್ಕಾರ ಮನ ದಲ್ಲಿ ಮೂಡಿತು. ಆದರದ ನುಡಿ ಹೊರಬರಲಿಲ್ಲ.

"ಏನು?" ಎಂಬ ಪ್ರಶ್ನೆ ಸ್ವಾಗತಕ್ಕೆ ಬದಲಾಗಿ ಕೇಳಬಂತು.

ಬಂದ ಸರಳೆಯಂತೂ ಸುಮಿತ್ರೆಯ ಮುಖ ನೋಡಿ ಹೆದರಿಹೋದಳು. ಆದರೂ ನಡುಗುವ ಧ್ವನಿಯಲ್ಲಿ

"ಅತ್ತಿಗೆ ನ....ಮ....ಸ್ಕಾ....ರ" ಎಂದು ಹೇಳಿದಳು.

"ಹುಂ" ಎಂಬ ಧ್ವನಿ ಮಾತ್ರ ಕೇಳಿ ಬಂತು.

"ರಮೇಶಣ್ಣಾ ಇಲ್ಲವೇ?"

"ಅಣ್ಣ" ಎಂದು ನುಡಿದ ಸರಳೆಯ ಮಾತನ್ನು ಕೇಳಿದ ಮೇಲೆ ಸುಮಿತ್ರೆಗೆ ಸಮಾಧಾನವಾದಂತಾಯಿತು. ಮನಸ್ಸಿನ ಚಿಂತೆ ಸ್ವಲ್ಪಮಟ್ಟಿಗೆ ಮಾಯವಾದಂತಾಯಿತು. "ಇಲ್ಲ, ಎಲ್ಲೋ ಹೋಗಿದ್ದಾರೆ" ಎಂದು ಹೇಳಿ ಏನೋ ಯೋಚಿಸುವಂತೆ ಒಳಗೆ ಹೊರಟು ಹೋದಳು.

ಸರಳೆಗೆ ಏನು ಮಾಡಬೇಕೆಂಬುದೇ ಅರಿವಾಗಲಿಲ್ಲ. "ಒಳಗೆ ಹೋಗಲೇ?"

"ಅತ್ತಿಗೆ ಏನನ್ನಾದರೂ ಅಂದರೆ—" ಎಂಬ ಯೋಚನೆ ಮೂಡಿ ಬಂತು.

ಅಷ್ಟರಲ್ಲಿಯೇ ರಮೇಶನೂ ಕಾರಿನಲ್ಲಿ ಕುಳಿತು ಬಂದು ಬಿಟ್ಟನು. ಹೊರಗಿನ ಚಾವಡಿಯಲ್ಲಿ ನಿಂತಿದ್ದ ಸರಳೆಯನ್ನು ಕಂಡು ಅವನಿಗೆ ಅತ್ಯಂತ ಆಶ್ಚರ್ಯವಾಯಿತು. "ಯಾರು ಸರಳೆಯೇ? ಯಾವಾಗ ಬಂದುಬಿಟ್ಟೆ?" ಎಂದು ಕೇಳಿದನು ರಮೇಶ.

ಸರಳೆಯ ಉತ್ಸಾಹವೆಲ್ಲಾ ಆಗಲೇ ಕರಗಿ ಹೋಗಿತ್ತು. "ಹೌದು, ಇದೇ ಈಗ ಬಂದೆ" ಎಂದಳು ಮಾತ್ರ.

ರಮೇಶ ಪುನಃ ಕೇಳಿದ—“ಯಾಕೆ ತಿಳಿಸಲಿಲ್ಲ? ತಿಳಿಸಿದ್ದರೆ ರೈಲ್ವೇ ಸ್ಟೇಷನ್ನಿಗೆ ನಾನೇ ಬರುತ್ತಿದ್ದೆನಲ್ಲಾ?”

“ಹೀಗೆ ಬಂದುಬಿಟ್ಟೆ. ಮೊದಲಾಗಿ ತಿಳಿಸಲು ನೆನಪಾಗಲಿಲ್ಲ.”

“ನನಗೆ ಒಮ್ಮೆಲೇ ಆಶ್ಚರ್ಯ ಹುಟ್ಟಿಸಬೇಕೆಂದು ಹೀಗೆ ಬಂದು ಬಿಟ್ಟೆಯಲ್ಲವೇ? ಸರಿ, ಸರಿ. ತಿಳಿಯಿತು........ಹಾಗೇಕೆ ಅಲ್ಲಿ ನಿಂತೆ? ಒಳಗೆ ಬಾ!” ಎನ್ನುತ್ತಾ ರಮೇಶ ಒಳಗೆ ನಡೆದ. ಸರಳೆ ಮೆಲ್ಲಮೆಲ್ಲನೆ ಆತನನ್ನು ಹಿಂಬಾಲಿಸತೊಡಗಿದಳು. ಆಗ ಆಕೆಯ ಕಣ್ಣೆದುರು ಕಟ್ಟಿತ್ತು— ಆಕೆ ಮೊದಲಾಗಿ ಆ ಮನೆಯನ್ನು ಪ್ರವೇಶಿಸಿದಾಗ ಸುಮಿತ್ರೆಯಿಂದ ಸಿಕ್ಕಿದ ಸ್ವಾಗತ! ಇಂದು ಕೂಡಾ ಆಕೆಗೆ ಸಿಕ್ಕಿದ ಸ್ವಾಗತ! ಈ ಎರಡು ಚಿತ್ರ ಗಳನ್ನೂ ಮನಸ್ಸಿನಲ್ಲಿ ಹೋಲಿಸುತ್ತಾ ನಡೆದಿದ್ದಳು.

ರಮೇಶನು ಮದರಾಸಿನ ವಿಶೇಷಗಳನ್ನು ಕುರಿತು ಸರಳೆಯೊಡನೆ ಕೇಳುತ್ತಾ ನಡೆದಿದ್ದನು. ಸರಳೆಗೆ ರಮೇಶನೊಡನೆ ಮಾತಾಡುತ್ತಾ ಮಾತಾ ಡುತ್ತಾ ಉತ್ಸಾಹ ತುಂಬಿ ತೇಲಿಬರುತಿತ್ತು. ತನ್ನ ಗೆಳತಿಯರ ಕುರಿತು ಸರಳಾ ರಮೇಶನಿಗೆ ಉತ್ಸಾಹದಿಂದ ಹೇಳುತ್ತಿದ್ದಳು—“ನನ್ನ ಗೆಳತಿಯರಲ್ಲಿ ಚಂದ್ರಾ ಎಂಬವಳು ನನ್ನ ಅಚ್ಚುಮೆಚ್ಚಿನವಳು. ಆಕೆ ಬಹಳ ತುಂಟಿ. ನೀವು ನನಗೆ ಬರೆದ ಪತ್ರಗಳನ್ನೆಲ್ಲಾ ಆಕೆಯೂ ಓದುತ್ತಿದ್ದಳು. ಅವುಗಳ ಕುರಿತು ಯಾವಾಗಲೂ ಹಾಸ್ಯ ಮಾಡುತ್ತಿದ್ದಳು. ನಿಮ್ಮ ಮದುವೆ ಎಂದು? ಎಂದು? ಎಂದು ಯಾವಾಗಲೂ ನನ್ನೊಡನೆ ಕೇಳುತ್ತಿದ್ದಳು. ಆದರೂ ಆಕೆಯ ಸ್ವಭಾವ ಬಹಳ ಒಳ್ಳೆಯದು”.

ರಮೇಶ ಉತ್ಸಾಹಿತನಾಗಿ ನಡುವೆಯೇ ಬಾಯಿಹಾಕಿ ಕೇಳಿದನು— “ಆಕೆಗೆ ನೀನು ಏನು ಹೇಳುತ್ತಿದ್ದೆ?”

ತನ್ನ ಸತ್ವಪೂರ್ಣ ಕಟಾಕ್ಷವನ್ನು ರಮೇಶನ ಮೇಲೆ ಹರಿಯಬಿಟ್ಟು ಸರಳೆ ಉತ್ತರಿಸಿದಳು—“ನನಗೇನು ಗೊತ್ತು? ಅವರೊಡನೆಯೇ ಕೇಳ ಬೇಕು. ನೀನೇ ಅವರಿಗೆ ಪತ್ರ ಬರೆದು ಕೇಳು ಎನ್ನುತ್ತಿದ್ದೆ”.

“ಬೇಗನೆ ಆಗಲಿದೆ. ನಿಶ್ಚಿತವಾದೊಡನೆಯೇ ನಿನಗೆ ಆಮಂತ್ರಣ ಕಳುಹಿಸಲಾಗುವುದು ಎಂದು ಇನ್ನಾದರೂ ತಿಳಿಸು ಆಕೆಗೆ”

ರಮೇಶನ ಈ ಮಾತು ಕೇಳಿ ಸರಳೆ ಅತ್ಯಾನಂದದಿಂದ ಆತನ ಕೈಯ್ಯನ್ನು ತಬ್ಬಿಕೊಂಡಳು. ಆದರೆ ಆ ಆನಂದ ಹೆಚ್ಚು ಕ್ಷಣ ಉಳಿಯು ಲಿಲ್ಲ. ಪಕ್ಕದ ಕೋಣೆಯಿಂದ "ಢಬ್" ಎಂಬ ಶಬ್ದ ಕೇಳಿ ಬೆದರಿ ರಮೇಶನ ಕೈಯ್ಯನ್ನು ಬಿಟ್ಟುಬಿಟ್ಟಳು.

"ಏನದು?" ಎಂದು ಕೇಳಿದ ರಮೇಶ. ಸರಳೆಯೂ ಕೇಳಿದಳು "ಏನು?" ಎಂದು. ಏನೆಂದು ಇಬ್ಬರಿಗೂ ತಿಳಿಯಲಿಲ್ಲ.

ಶಬ್ದ ಏನೆಂದು ತಿಳಿಯಲು ರಮೇಶ ಪಕ್ಕದ ಕೋಣೆಗೆ ಓಡಿದ. ಅಲ್ಲಿನ ದೃಶ್ಯ ಕಂಡು ಬೆದರಿ "ಅಯ್ಯೋ" ಎಂದು ಚೀರಿದ. ಸರಳೆಯೂ ಗಾಬರಿಯಿಂದ ಓಡಿ ನೋಡಿದಳು—ಅಲ್ಲಿ ಸುಮಿತ್ರೆ ಕುರ್ಚಿಯಿಂದ ಕೆಳ ಗುರುಳಿ ನೆಲದಲ್ಲಿ ಬಿದ್ದು ಮೂರ್ಛೆ ಹೋಗಿದ್ದಳು!

ರಮೇಶ ತಾನು ಬಂದ ತಕ್ಷಣ ಸರಳೆಯನ್ನು ನೋಡಿದ. ಅವಳ ಜತೆಯಲ್ಲಿ ಮಾತಾಡುತ್ತಾ ಉತ್ಸಾಹಿತನಾದ. ಆದರೆ ತನ್ನ ಬಾಳ ಗೆಳತಿ ಸುಮಿತ್ರೆಯೂ ತನ್ನ ಸನಿಯದಲ್ಲೇ ಇರುವಳೆಂಬುದನ್ನು ಮರೆತ. ಸರ ಳೆಯೂ ರಮೇಶನ ಆದರದ ಮುಖ ನೋಡಿ ಸುಮಿತ್ರೆಯನ್ನು ಮರೆತಿ ದ್ದಳು. ಈ ರಮೇಶ-ಸರಳೆಯರ ಚಲನವಲನಗಳನ್ನು ಈಕ್ಷಿಸುವುದರಲ್ಲಿ ಸುಮಿತ್ರೆಯು ನಿರತಳಾಗಿದ್ದಳು. ರಮೇಶನ ಮಾತನ್ನು ಕೇಳಿ ತನ್ನ ಬಾಳಿಗೆ ವಿಷವು ಕೂಡಿಬಂದಿತಲ್ಲಾ ಎಂದು ಚಿಂತೆಯಿಂದ ಮೂರ್ಛೆ ಹೊಂದಿದ್ದಳು.

ಸರಳೆ ರಮೇಶ ಇಬ್ಬರೂ ಕೂಡಿ ಆಕೆಯನ್ನು ಎತ್ತಿ ಹಾಸಿಗೆಯಲ್ಲಿ ಮಲಗಿಸಿದರು. ನರ್ಸ್ ಆದ ಸರಳೆ ಮೂರ್ಛಿತೆಯಾದ ಸುಮಿತ್ರೆಗೆ ಶೈತ್ಯೋಪಚಾರ ಮಾಡತೊಡಗಿದಳು. ರಮೇಶನು ಕೂಡಲೇ ಡ್ರೈವರ ನನ್ನು ಕಾರಿನೊಡನೆ ಡಾಕ್ಟರರನ್ನು ಕರೆದುತರಲು ಕಳುಹಿಸಿದನು.

ಸುಮಿತ್ರೆಗೆ ಸರಳೆಯ ಚಿಕಿತ್ಸೆಯಿಂದ ಮೆಲ್ಲಮೆಲ್ಲನೆ ಎಚ್ಚರ ಬಂತು. ಎಚ್ಚರಗೊಂಡಾಗ ಆಕೆಯನ್ನು ಸರಳೆ ಮೆಲ್ಲನೆ ಕರೆದಳು—"ಅತ್ತಿಗೆ!"

ಸುಮಿತ್ರೆಯ ಮೈ ಮೆಲ್ಲಮೆಲ್ಲನೆ ಕಂಪಿಸುತಿತ್ತು. ಆಕೆಯ ಕಣ್ಣು ಗಳು ಕೆಂಪಡರಿದ್ದುವು. ಆಕೆ ಮಾತಾಡಲು ಪ್ರಯತ್ನಿಸಿದಳು. "ನೀನು.... ನೀನು......." ಎಂಬ ಶಬ್ದಗಳು ಮಾತ್ರ ಆಕೆಯ ಕಂಪಿತ ಕಂಠದಿಂದ ಹೊರಬಂದುವು.

ಸುಮಿತ್ರೆ ಸರಳೆಯನ್ನು ನೋಡಲಾರದೆಯೋ ಎಂಬಂತೆ ಮುಖವನ್ನು ಇನ್ನೊಂದು ಬದಿಗೆ ಹೊರಳಿಸಿದಳು. ಅಲ್ಲಿ ಅಪರಾಧಿಯಂತೆ ರಮೇಶ ನಿಂತಿದ್ದ. ಸುಮಿತ್ರೆ ಆತನ ಕೈಗಳನ್ನು ತನ್ನ ಕೈಗಳಿಂದ ಹಿಡಿದುಕೊಂಡು ಕರುಣಾಪೂರ್ಣ ದೃಷ್ಟಿಯಿಂದ ಆತನನ್ನು ನೋಡತೊಡಗಿದಳು. "ನನ್ನನ್ನು ಮರೆಯಬೇಡಿರಿ; ನಾನು ನಿಮ್ಮವಳು—ನನಗೆ ದ್ರೋಹ ಬಗೆಯಬೇಡಿರಿ" ಎಂದು ಆ ದೃಷ್ಟಿಯು ಬೇಡತೊಡಗಿತ್ತು.

ಸುಮಿತ್ರೆಯ ಕಣ್ಣಿನ ನೋಟದ ಬೇಡಿಕೆಯನ್ನು ರಮೇಶ ಗುರುತಿಸಿಕೊಂಡನೇನೋ! ಅಪರಾಧಿಯಂತೆ ತಲೆತಗ್ಗಿಸಿಕೊಂಡನು. ತನ್ನ ಮತ್ತು ಸರಳೆಯ ಮಾತುಕತೆಯನ್ನು ಸುಮಿತ್ರೆ ಕೇಳಿರಬೇಕು. ಅದರಿಂದಲೇ ಈ ಅನಾಹುತ ಉಂಟಾದುದು ಎಂದು ರಮೇಶನಿಗೆ ಅನುಮಾನ ಉಂಟಾಗಿತ್ತು.

"ಬಾಯಾರುತ್ತಿದೆಯೇ? ಏನು ಬೇಕು ಅತ್ತಿಗೆ?" ಎಂದು ಕೇಳಿದಳು ಸರಳೆ.

"ಒಂದಿಷ್ಟು ವಿಷ!" ಎಂದು ಅತ್ಯಂತ ಕಷ್ಟದಿಂದ ನುಡಿದು ಸುಮಿತ್ರೆ ಕಣ್ಣು ಮುಚ್ಚಿಕೊಂಡಳು. ರಮೇಶ ಗಾಬರಿಯಿಂದ ಕರೆದನು "ಸುಮಿತ್ರಾ!"

ಸುಮಿತ್ರೆ ಉತ್ತರಿಸಲಿಲ್ಲ. ಆದರೆ, ರಮೇಶನ ಕೈಗಳನ್ನು ಹಾಗೇ ಹಿಡಿದುಕೊಂಡಿದ್ದಳು.

ಅಷ್ಟರಲ್ಲಿ ಡ್ರೈವರ್ ಡಾಕ್ಟರರನ್ನು ಕರೆದುಕೊಂಡು ಬಂದನು. "ಡಾಕ್ಟರ್, ನಮಸ್ಕಾರ" ಎಂದು ನಮಸ್ಕರಿಸಿದನು ರಮೇಶ.

"ನಮಸ್ಕಾರ" ಎಂದು ಪ್ರತಿ ನಮಸ್ಕರಿಸಿದರು ಡಾಕ್ಟರ್. ಅನಂತರ ಸುಮಿತ್ರೆಯನ್ನು ನೋಡುತ್ತಾ "ಏನಾಯಿತು ಇವರಿಗೆ?" ಎಂದು ಕೇಳಿದರು.

"ಕುರ್ಚಿಯಿಂದ ಕೆಳಗೆ ಬಿದ್ದು ಮೂರ್ಛೆ ಹೋದಳು" ಎಂದನು ರಮೇಶ.

ಡಾಕ್ಟರ್ ಮೌನದಿಂದ ಸುಮಿತ್ರೆಯನ್ನು ಪರೀಕ್ಷಿಸತೊಡಗಿದರು. ಸುಮಿತ್ರೆಯ ದೇಹದ ಉಷ್ಣ ತೀವ್ರಗತಿಯಿಂದ ಏರುತ್ತಿತ್ತು. ಬಾಯಲ್ಲಿ ಏನೋ ಬಡಬಡಿಸುತ್ತಿದ್ದಳು ಆಕೆ.

"ಏನೂ ಪೆಟ್ಟಾಗಿಲ್ಲ. ಆದರೆ ಜ್ವರ ಮಾತ್ರ ಏರತೊಡಗಿದೆ. ಜಾಗ್ರತೆಯಿಂದ ಆರೈಕೆ ಮಾಡಬೇಕು. ಇಲ್ಲವಾದರೆ, ರೋಗ ಭಯಂಕರವಾದೀತು." ಪರೀಕ್ಷೆ ಮುಗಿಸಿ ಡಾಕ್ಟರ್ ನುಡಿದರು. ಅನಂತರ ಒಮ್ಮೆ ಸುತ್ತಲೂ ನೋಡಿ ರಮೇಶನ ಕಿವಿಯಲ್ಲಿ ನುಡಿದರು—"ಈಕೆ ಗರ್ಭಿಣಿ. ಚೆನ್ನಾಗಿ ನೋಡಿಕೊಳ್ಳದಿದ್ದರೆ ಗರ್ಭಪಾತವಾದೀತು, ಅಲ್ಲದೆ ಆಕೆಯ ಜೀವಕ್ಕೂ ಅಪಾಯವಿದೆ........ಏನೋ ಮಾನಸಿಕವಾದ ಕಾರಣ ಇರಬೇಕು—ಬೇರೇನೂ ಕಾರಣ ತೋರುವುದಿಲ್ಲ ರೋಗಕ್ಕೆ."

ಸುಮಿತ್ರೆ ಗರ್ಭವತಿ! ರಮೇಶನ ತಲೆಯೊಳಗೆ ಏನೋ ಕಲಕಿದಂತಾಯಿತು. ಆತ ತಲೆಯೆತ್ತಿ ಸರಳೆಯತ್ತ ನೋಡಿದನು. ಆದರೆ ಸರಳೆ ಯಾವಾಗಲೋ ಆ ಕೋಣೆ ಬಿಟ್ಟಿದ್ದಳು!

ಒಂದು ಇಂಜಕ್ಷನ್ ಕೊಟ್ಟು—"ಔಷಧ ಕಳುಹಿಸುತ್ತೇನೆ. ಅನಂತರ ಸಾಯಂಕಾಲ ಇನ್ನೊಮ್ಮೆ ಬರುತ್ತೇನೆ. ನಮಸ್ಕಾರ!" ಎನ್ನುತ್ತಾ ಡಾಕ್ಟರ್ ಹೊರಟು ಹೋದರು.

"ನಮಸ್ಕಾರ!" ಎನ್ನುತ್ತಾ ರಮೇಶ ಬಳಿಯ ಕುರ್ಚಿಯಲ್ಲಿ ಕುಳಿತುಕೊಂಡನು. ಆತನ ಕಿವಿಯಲ್ಲಿ ಡಾಕ್ಟರರ—"ಈಕೆ ಗರ್ಭಿಣಿ....ಚೆನ್ನಾಗಿ ನೋಡಿಕೊಳ್ಳದಿದ್ದರೆ ಗರ್ಭಪಾತವಾದೀತು........ಆಕೆಯ ಜೀವಕ್ಕೂ ಅದರಿಂದ ಅಪಾಯವಿದೆ........" ಎಂಬ ಮಾತು ಮತ್ತೆ ಮತ್ತೆ ಕೇಳತೊಡಗಿತು.

"ಸುಮಿತ್ರೆ ಗರ್ಭಿಣಿ!...."ರಮೇಶ ಇದುವರೆಗೆ ಅರಿತಿದ್ದ—"ಸುಮಿತ್ರೆಯಂತೂ ಬಂಜೆ. ಆಕೆ ಮಕ್ಕಳನ್ನು ಹೆರಲಾರಳು" ಎಂದು. ಆದರೆ ಇಂದು ಡಾಕ್ಟರರ ನುಡಿ "ಸುಮಿತ್ರೆಯು ಗರ್ಭಿಣಿ" ಎಂದು ಮೊರೆಯುತ್ತಿತ್ತು.

ಈ ವಿಚಾರದಿಂದ ತಾನು ತಂದೆಯಾಗುವೆನೆಂಬ ಉತ್ಸಾಹ ತೋರತೊಡಗಿತು. ಸಂತಸದಿಂದ ಮಗುವನ್ನು ಆಡಿಸುವೆನೆಂಬ ಭವಿಷ್ಯದ ಕನಸು ಕಣ್ಣಿನಲ್ಲಿ ಕಾಣತೊಡಗಿತು. ಆದರೆ "ಗರ್ಭಪಾತವಾದೀತು" ಎಂಬ ಡಾಕ್ಟರರ ಎಚ್ಚರಿಕೆ ಅವನನ್ನು ತಕ್ಷಣ ನಿರಾಶೆ ಮಾಡಿತು. ನಿರಾಶೆಯಿಂದ ಬಳಲಿ ಚಿಂತಿಸುವ ಸಮಯದಲ್ಲಿ ಸರಳೆಯ ಸುಂದರ ವದನ

ತೇಲಿ ಬಂತು. ಸುಮಿತ್ರೆಯ ಮುಖವೂ ಕಾಣಬಂತು. ಸರಳೆಯ ಮುಖವೇ ಮೇಲಾಗಿ ಕಂಡು ಬಂದು ಅವನನ್ನು ಮತ್ತೂ ಹುಚ್ಚನನ್ನಾಗಿ ಮಾಡತೊಡಗಿತು.

ಅಂತೂ ರಮೇಶನ ಮನಸ್ಸು ಸರಳೆಗೆ ಮಾರುಹೋಗಿತ್ತು! ಅವನ ಮನಸ್ಸಿನಲ್ಲಿ ಈ ಮೊದಲು ಒಂದು ಉಪಾಯ ಹೊಳೆದಿತ್ತು—"ಸುಮಿತ್ರೆ ಬಂಜೆ. ಆದುದರಿಂದ ಮಕ್ಕಳನ್ನು ಪಡೆಯುವುದಕ್ಕಾಗಿ ತಾನು ಸರಳೆಯನ್ನು ವರಿಸಬಹುದು" ಎಂದು.

ಆದರೆ ಆತನ ಅಭಿಲಾಷೆಯನ್ನು ಮುರಿಯಲಿಕ್ಕಾಗಿಯೇ ಇದು--ಆರು ವರುಷಗಳಿಂದ ಬಂಜೆಯಾಗಿದ್ದ ಸುಮಿತ್ರೆ ಇಂದು ಬಸುರಾಗಿದ್ದಳೇನೋ!

ರಮೇಶನು ವಿಚಾರದ ಸುಳಿಯಲ್ಲಿ ಸಿಲುಕಿ ಬಿಸಿಯೇರಿದ್ದ ತನ್ನ ತಲೆಯನ್ನು ನೇವರಿಸುತ್ತಾ ಹಾಗೆಯೇ ಕುಳಿತು ಬಿಟ್ಟನು. ಅವನ ಎದುರು ಮಂಚದಲ್ಲಿ ಮಲಗಿದ್ದ ಸುಮಿತ್ರೆ ಆತನ ಹನಿಗಣ್ಣಿಗೆ ತೋರುತ್ತಿರಲಿಲ್ಲ.

"ತಾನು ನೆನಸುವುದೊಂದು ದೈವ ಎಣಿಸುವುದೊಂದು" ಎಂಬ ಎಣಿಕೆ ಆತನಲ್ಲಿ ಒಡಮೂಡಿ ಬಂತು.

೧೨

"ರಮೇಶ, ನೀನು ಅಂದು ಹೇಳಿದಂತೆಯೇ ಆಯಿತು. ಇಂದು ನಾನು ಅಂದಿನಂತಿಲ್ಲ. ನಾನು ಬಡರೋಗಿಗಳ ಸೇವೆ—ಜನತೆಯ ಸೇವೆ ಮಾಡುವ ಸ್ವತಂತ್ರಜೀವಿ........" ಉತ್ಸಾಹದಿಂದ ಸರಳೆ ಹೇಳಿದಳು.

ಸರಳೆಯ ಮಾತು ರಮೇಶನಿಗೆ ಅರ್ಥವಾಗಲಿಲ್ಲ. "ಏನು ಸರಳಾ?" ಎಂದು ಕೇಳಿದನು.

"ಏನಿಲ್ಲ ಇಂದಿನಿಂದ ನಾನು ಒಬ್ಬ ಸ್ವತಂತ್ರಜೀವಿ ಎಂದೆ ಅಷ್ಟೆ" ಎಂದರೇನು? ನನಗೆ ಅರ್ಥವಾಗಲಿಲ್ಲ—ಸ್ವಲ್ಪ ವಿವರಿಸಿ ಹೇಳು!"

"ಎಂದರೆ, ಇಂದು—ನನಗೆ ಕೆಲಸ ಸಿಕ್ಕಿತು" ಎನ್ನುತ್ತಾ ಸರಳೆ ಒಂದು ಪತ್ರವನ್ನು ರಮೇಶನ ಕೈಗಿತ್ತಳು.

ರಮೇಶ ಅದನ್ನು ಓದತೊಡಗಿದನು. ಓದುತ್ತಾ ಆತನ ಮುಖವು ಆಲೋಚನೆಯಲ್ಲಿ ತುಂಬಿ ಹೋಯಿತು. ಮುಖವಂತೂ ಕುಂದಿಹೋಯಿತು. ವ್ಯಸನದಿಂದ ಆತ ಕೇಳಿದನು—"ಯಾಕೆ ಸರಳಾ! ನೀನು ಕೆಲಸಕ್ಕೆ ಸೇರುವೆಯಾ?"

"ಹೌದು ಸೇರುತ್ತೇನೆ—ಸೇರುವುದಕ್ಕಾಗಿಯೇ ಕೆಲಸಕ್ಕೆ ಅರ್ಜಿ ಹಾಕಿದ್ದೆ. ಮತ್ತೇನು ಮಾಡಬೇಕು ನನ್ನಂತಹ ಬಡವಳು........?" ಸರಳೆ ಉತ್ತರಿಸಿದಳು.

"ಬಡವಳೇ? ನನಗೆ ತಿಳಿಸದೆಯೇ ಅರ್ಜಿ ಹಾಕಿದೆಯಾ? ನೀನು ಈ ಅಲ್ಪ ಕೆಲಸಕ್ಕೆ ಸೇರಿ ನನ್ನ ಮನೆತನದ ಮರ್ಯಾದೆಯನ್ನು ಕಳೆಯತೊಡಗುವೆಯಾ?" ರಮೇಶನ ಮಾತಿನಲ್ಲಿ ಕಳವಳ ತುಂಬಿತ್ತು. ಸರಳೆಯು ಏನನ್ನೂ ಮಾತನಾಡಲಿಲ್ಲ.

"ನಾನು ಶ್ರೀಮಂತನಾದರೆ ನೀನೂ ಕೂಡಾ ಶ್ರೀಮಂತಳಲ್ಲವೇ? ಬಡವಳೇ? ನನ್ನ ಮನೆತನಕ್ಕೆ ಸೇರಿದವಳಲ್ಲವೇ ನೀನು?" ಎಂದು ಉದ್ವೇಗದಿಂದ ಒಂದೇ ಸವನೆ ಪ್ರಶ್ನಿಸತೊಡಗಿದ.

"ಹಾಗಾದರೆ ಕೆಲಸಕ್ಕೆ ಹೋಗುವುದು ಬೇಡವೇ?"

"ಬೇಡ."

"ಯಾಕಾಗಿ?"

"ನಾನು ನಿನ್ನನ್ನು ಬೇಗನೆ........ಅಗುವುದಕ್ಕಾಗಿ!" ಎಂದು ತನ್ನ ನಗೆಯನ್ನು ಬೀರಿದನು. ಅದನ್ನು ಕಂಡು ಸರಳೆಯೂ ನಕ್ಕುಬಿಟ್ಟಳು.

ಅಭಿಮಾನಪೂರ್ಣದೃಷ್ಟಿಯಿಂದ ರಮೇಶನನ್ನು ನೋಡುತ್ತಾ ಸರಳೆ ಕೇಳಿದಳು—"ಇಂದು ಸಿನೇಮಾಕ್ಕೆ ಹೋಗೋಣವೇ?—ಬರುವೆಯಾ?"

"ನಿನಗೆ ಉದ್ಯೋಗ ಸಿಕ್ಕಿದ ಆನಂದಕ್ಕಾಗಿಯೇ?"

"ಹೂಂ"

ಆಸೆಗಣ್ಣುಗಳಿಂದ ತನ್ನನ್ನು ನೋಡುತ್ತಾ ಸರಳೆ ಕೇಳಿದಾಗ ಇಲ್ಲ ವೆನ್ನಲಾಗಲಿಲ್ಲ ರಮೇಶನಿಗೆ "ಹೂಂ" ಎಂದನು. "ಗಂಟೆ ಆರಾಯಿತು —ಬೇಗನೆ ಹೊರಡುವ" ಎನ್ನುತ್ತಾ ರಮೇಶ ತನ್ನ ಸೂಟ್ ಹಾಕಿಕೊಳ್ಳತೊಡಗಿದನು.

ಸರಳೆ ಕಾಲು ಗಂಟೆಯಲ್ಲಿ ಸಿಂಗರಿಸಿಕೊಂಡು ಬಂದಳು. ರಮೇಶ
ಅದನ್ನು ನೋಡಿ ತನ್ನ ಕಣ್ಣುಗಳನ್ನೇ ನಂಬದಾದನು—"ಈಕೆ ಸರಳೆಯೋ?
ಅಲ್ಲ........ಅಪ್ಸರೆ!" ಎಂದಿತು ಅವನ ಮನಸ್ಸು.

ಹೊರಟು ನಿಂತು ಸರಳೆ ಕೇಳಿದಳು—"ಸುಮಿತ್ರಾ, ಅತ್ತಿಗೆಗೆ ಹೇಳ
ಬೇಡವೇ?"

"ಹೂಂ. ಇನ್ನು ಆಕೆಗೆ ಹೇಳಿ, ಅಕೆಯ ಬಾಯಿಯಿಂದ ಏನಾ
ದರೂ ಚುಚ್ಚು ಮಾತು ನುಡಿಸಿಕೊಳ್ಳಬೇಕೇ? ನಡೆ, ಕಾರಿನಲ್ಲಿ ಕುಳಿತು
ಕೊಳ್ಳೋಣ. ಸಮಯವಾಯಿತು" ಎಂದನು ರಮೇಶ. ಆ ಗಳಿಗೆಯಲ್ಲಿ
ಸುಮಿತ್ರೆಯನ್ನು ನೆನೆಯುವುದೂ ತಪ್ಪೆಂದು ಅವನಿಗೆ ಎನ್ನಿಸುತ್ತಿತ್ತು.

ಕಾರು ಸಿನೇಮಾ ಟೋಕೀಸಿನ ಎದುರು ಬಂದು ನಿಂತಿತು. ದಂಪತಿ
ಗಳಂತೆ ಇಬ್ಬರೂ ಕೆಳಗಿಳಿದರು. ರಮೇಶನ ಅಪ್ಪಣೆಯಂತೆ ಡ್ರೈವರ್
ಫಸ್ಟ್ ಕ್ಲಾಸಿನ ಎರಡು ಟಿಕೇಟುಗಳನ್ನು ತಂದಿತ್ತು ಏನೋ ಅಲ್ಲಿಯೇ
ಕೇಳುವ ಆಶೆಯನ್ನು ತೋರಿಸುತ್ತಾ ನಿಂತಿದ್ದನು. ಅದನ್ನು ತಿಳಿದು
ಸರಳೆ ವಿಚಾರಿಸುತ್ತಾ ರಮೇಶನ ಕಡೆಗೆ ನೋಡಿದಳು. ಕೂಡಲೆ ಒಂದು
ರೂಪಾಯಿ ತೆಗೆದು ಡ್ರೈವರನ ಕೈಗಿತ್ತು—"ನೀನೂ ಒಂದು ಟಿಕೇಟು ಪಡೆ
ದುಕೋ!" ಎಂದು ನುಡಿದದ್ದೇ ತಡ ಡ್ರೈವರ್ ಹಿಗ್ಗಿದ ಮನಸ್ಸಿನಿಂದ
ಬುಕ್ಕಿಂಗ್ ಆಫೀಸಿನತ್ತ ನಡೆದನು.

ಅಂತೆಯೇ ರಮೇಶ ಆಕೆಯೊಡನೆ ಒಂದು ಪಾನೀಯ ಮಂದಿರ
ವನ್ನು ಪ್ರವೇಶಿಸಿ ಎರಡು ಕಪ್ "ವಿಮ್ಟೋ" ತರಲು ಅಪ್ಪಣೆ ಮಾಡಿದನು.

"ವಿಮ್ಟೋ" ಎಂಬ ಹೆಸರು ಕೇಳಿ ಸರಳೆ ಬೆದರಿದಳು. "ಏನಿದು
ರಮೇಶ?"

"ಏನೂ ಇಲ್ಲ. ಕುಡಿಯುವುದಕ್ಕೆ ಅಷ್ಟೆ" ಎಂದು ಮಾಣಿ ತಂದಿಟ್ಟ
ಕಪ್‌ಗಳಲ್ಲಿ ಒಂದನ್ನು ತಾನೇ ಎತ್ತಿ ಆಕೆಯ ನಡುಗುವ ಕೈಯ್ಯಲ್ಲಿಟ್ಟನು.
ಸರಳೆ ಮರುಮಾತಾಡದೆ ಕಣ್ಣು ಮುಚ್ಚಿ ಕುಡಿದುಬಿಟ್ಟಳು. ಆಕೆ ಕುಡಿ
ಯಲು ಹಿಂಜರಿದಿದ್ದರೆ ಆಕೆಗೆ ರಮೇಶ ತಾನೇ ಕುಡಿಸುವುದಕ್ಕೂ ಹಿಂದು
ಮುಂದು ನೋಡುತ್ತಿರಲಿಲ್ಲ.

ವಿದ್ಯುದ್ದೀಪದ ಝುಗಝುಗಿಸುವ ಬೆಳಕಿನಲ್ಲಿ ಆ ಕೋಣೆ ದೇವಪುರಿಯಂತೆ ಕಾಣುತಿತ್ತು. ಗೋಡೆಗಳಲ್ಲಿ ತೂಗಿದ ನಿಲುಗನ್ನಡಿಯಲ್ಲಿ ಇಬ್ಬರ ಪ್ರತಿಬಿಂಬಗಳೂ ತೋರುತ್ತಿದ್ದುವು. ಕನ್ನಡಿಗಳಲ್ಲಿ ಪ್ರತಿಬಿಂಬಿಸಿದ ತನ್ನ ರೂಪಶ್ರೀಯನ್ನು ನೋಡಿ ತನಗೆ ತಾನೇ ಮಾರುಹೋದಳು ಸರಳೆ. ಆಕೆಗೆ ಆಕೆ ಎಂದೂ ಅಷ್ಟು ಸುಂದರಳಾಗಿ ಕಂಡಿದ್ದಿಲ್ಲ!

ಎದುರಿನ ಕನ್ನಡಿಯಲ್ಲಿ ತೋರುತ್ತಿದ್ದ ತನ್ನ ಪ್ರತಿಬಿಂಬವನ್ನು ರಮೇಶನಿಗೆ ತೋರಿಸುತ್ತಾ ಸರಳೆ ಕೇಳಿದಳು—"ರಮೇಶ, ಆಕೆ ಯಾರು?"

ತೆರೆಗಣ್ಣಿನಿಂದ ಆ ಬಿಂಬವನ್ನು ದಿಟ್ಟಿಸುತ್ತಾ ರಮೇಶ ನುಡಿದ—"ಆಕೆ ಯಾರೋ ನನಗರಿಯದು. ಆದರೆ ಇವಳಂತೂ ನನ್ನ....ನನ್ನ ಸರಳೆ!" ಎನ್ನುತ್ತಾ ಸರಳೆಯ ಭುಜದ ಮೇಲೆ ತನ್ನ ಬಲಗೈ ಇರಿಸಿ ಮುಂದುವರಿದನು.

ಅಲ್ಲಿ ಹಾಗೆಯೇ ಕನ್ನಡಿಯಲ್ಲಿ ಮೂಡಿದ್ದ ತನ್ನ ಮತ್ತು ರಮೇಶನ ಪ್ರತಿಬಿಂಬಗಳನ್ನು ಕಣ್ದಣಿಯೆ ನೋಡುತ್ತಿರಬೇಕೆಂದು ಸರಳೆಯ ಇಚ್ಛೆ. "ಬಾ ಸರಳಾ! ಒಳಗೆ ಹೋಗೋಣ" ಎಂಬ ರಮೇಶನ ಮಾತನ್ನು ಕೇಳುತ್ತಾ ಮುಂದರಿದಳು. ಸೋಫಾವೊಂದರಲ್ಲಿ ಅವರಿಬ್ಬರೂ ಅಕ್ಕಪಕ್ಕದಲ್ಲಿ ಕುಳಿತು ಕೊಂಡಾಗಲೂ ರಮೇಶನ ದೇಹಕ್ಕೆ ಸರಳೆ ಒರಗಿಕೊಂಡೇ ಕುಳಿತಿದ್ದಳು. ಎದುರಿಗೆ ಪ್ರದರ್ಶಿತವಾಗುತ್ತಿದ್ದ ಚಿತ್ರದ ಕಡೆಗೆ ಇಬ್ಬರದೂ ಗಮನವಿರಲಿಲ್ಲ. ಎಷ್ಟೋ ಹೊತ್ತು ಹಾಗೆ ಕಳೆಯಿತೋ ಏನೋ!

ರಜತಪರದೆಯ ಮೇಲಿನ ಚಿತ್ರವನ್ನು ನೋಡುವುದರಲ್ಲಿ ರಮೇಶ ತಲ್ಲೀನನಾದ. ಚಿತ್ರದಲ್ಲಿ ,ಸರಸ ವ್ಯಕ್ತಿಗಳ ಪ್ರೇಮನೋಟ ಪ್ರದರ್ಶಿತವಾದಾಗಲಂತೂ ಆತನ ಮನಸ್ಸು ಉದ್ವೇಗಗೊಳ್ಳುತ್ತಲಿತ್ತು. ಆಗ ಸರಳೆಯ ಮುಖವನ್ನು ನೋಡಿ ತನ್ನ ಮನಸ್ಸನ್ನು ಶಾಂತಗೊಳಿಸಿಕೊಳ್ಳುತ್ತಿದ್ದ. ಚಿತ್ರದಲ್ಲಿ ನಾಯಕನು ತನ್ನ ಪ್ರೇಮಿಯನ್ನು ಆಲಂಗಿಸಿ, ಪ್ರೇಮದ ಕುರುಹೆಂದು ಅವಳ ಮನದ ಬಯಕೆ ಪೂರೈಸಲು ಅವಳ ಹುಸಿ ನಗೆಯನ್ನು ಬೀರುವ ಓಷ್ಠ್ಯಗಳಿಗೆ ಮುತ್ತಿಡುವ ದೃಶ್ಯದಿಂದಲಂತೂ ರಮೇಶನು ಬಹಳ ಉತ್ತೇಜಿತನಾದ. ತನ್ನ ಎದೆಯ ಮೇಲೆ ತಲೆಯನ್ನು ಒರಗಿಸಿರುವ ಸರಳೆಯನ್ನು ದಿಟ್ಟಿಸಿ ನೋಡತೊಡಗಿ ಅವಳ ಮಂದಹಾಸದಿಂದ

ಭ್ರಮಿತನಾದನು. ಆ ಸಮಯದಲ್ಲಿ ತಾನೇ ನಾಯಕನೋ ಎಂಬಂತೆ ಸರಳೆಯ ಮುಗ್ಧ ಮುಖಕ್ಕೆ ಮರುಳಾಗಿ ವರ್ತಿಸಿದನು ರಮೇಶ.

ಅಷ್ಟರಲ್ಲಿಯೇ ಚಿತ್ರಮಂದಿರದಲ್ಲಿ ದೀಪಗಳೆಲ್ಲವೂ ಒಮ್ಮೆಲೆ ಪ್ರಕಾಶಿಸಿದುವು. ತಮ್ಮ ಪ್ರೇಮಾಸ್ವಾದನದ ಸಮಯದಲ್ಲಿ ಈ ರೀತಿ ಅಡ್ಡಿಯಾದುದನ್ನರಿತು ಇಬ್ಬರೂ ಮೇಲೆದ್ದರು.

ಚಿತ್ರದ ವಿರಾಮಕಾಲವೆಂದು ಅವರಿಗೆ ತಿಳಿಯುವುದಾದರೂ ಹೇಗೆ? ತಮ್ಮ ಈ ರೀತಿಯ ವಿಲಾಸಪಥದಲ್ಲಿ! ಚಿತ್ರ ಮುಗಿಯಿತೆಂದೇ ಭಾವಿಸಿದರೋ ಏನೋ?

"ಸಿನೆಮಾ ಮುಗಿಯಿತೇ? ಹೋಗೋಣ ರಮೇಶ!" ಎಂದು ಎದ್ದು ನಿಂತಳು ಸರಳೆ.

"ಹೋಗೋಣ" ಎನ್ನುತ್ತಾ ರಮೇಶ ಸರಳೆಯನ್ನು ಕರೆದುಕೊಂಡು ಹೊರಗೆ ತನ್ನ ಮೋಟಾರು ನಿಲ್ಲಿಸಿದ್ದಲ್ಲಿಗೆ ಬಂದನು. ಡ್ರೈವರಿಗಾಗಿ ಅತ್ತ ಇತ್ತ ನೋಡಿ ಹುಡುಕತೊಡಗಿದನು.

"ಎಲ್ಲಿ ಸತ್ತನೋ ಆತ! ಸಾಯಲಿ! ನಾವೇ ಹೋಗೋಣ." ಎಂದು ಹೇಳುತ್ತಾ ರಮೇಶನು ಸರಳೆಯನ್ನು ಪಕ್ಕದಲ್ಲಿ ಕುಳಿತುಕೊಳ್ಳಿಸಿ ತಾನೇ ಕಾರನ್ನು ನಡೆಸಿಕೊಂಡು ಹೊರಟನು. ಮಳೆಯು ಸಣ್ಣ ಮಟ್ಟಿನಲ್ಲಿ ಸುರಿಯುತ್ತಿತ್ತು. ತನ್ನ ಪ್ರಕಾಶಮಾನವಾದ ದೀಪಗಳಿಂದ ಮಾರ್ಗವನ್ನು ಬೆಳಗಿಸುತ್ತಾ ಕಾರು ಮುಂದೆ ಓಡತೊಡಗಿತು.

"ಹೇಗಿತ್ತು ರಮೇಶ, ಸಿನೇಮಾ?" ಕಾರು ಓಡುತ್ತಿರುವಾಗ ಕೇಳಿದಳು ಸರಳೆ.

"ಚೆನ್ನಾಗೇನೋ ಇತ್ತು....ಆದರೆ ಅಷ್ಟರಲ್ಲಿಯೇ ಆ ಹಾಳು ದೀಪ...." ಅದನ್ನು ಕೇಳಿ ಸರಳೆ ನಕ್ಕಳು. ರಮೇಶನೂ ನಕ್ಕನು. ಕಾರನ್ನು ನಡೆಸುತ್ತಲೇ ಸರಳೆಯನ್ನು ಆಲಂಗಿಸಿದನು.

ಕಾರು ರಮೇಶನ ಮನೆಮುಟ್ಟಿದಾಗ ಇನ್ನೂ ಎಂಟು ಗಂಟೆ ಮಾತ್ರವಾಗಿತ್ತು. ಸರಳೆ ಆಶ್ಚರ್ಯದಿಂದ ಕೇಳಿದಳು—"ಸಿನೆಮಾ ಏನು ಇಷ್ಟು ಬೇಗನೆ ಬಿಟ್ಟುಬಿಟ್ಟಿತೇ?"

"ಏನೋ! ಚಿಕ್ಕದಾದರೂ ಬಹಳ ಚೊಕ್ಕವಾಗಿತ್ತು" ಎಂದನು ರಮೇಶ.

ಅಂತೂ ಕಾರಿನ ಡ್ರೈವರ್ ಸಿನಿಮಾ ಬಿಟ್ಟ ಮೇಲೆ ಹೊರಗೆ ಬಂದು ನೋಡಿದಾಗ ಕಾರಿಲ್ಲದುದನ್ನು ಕಂಡು ಗಾಬರಿಯಾದ. ಆ ಮಳೆಯಲ್ಲಿಯೇ ಮನೆಗೆ ನಡೆದು ಶೆಡ್ಡಿನಲ್ಲಿದ್ದ ಕಾರನ್ನು ಕಂಡು ಸಮಾಧಾನ ಪಡೆದ.

"ಅಂತೂ ನಾನೂ ಒಂದು ಸಿನಿಮಾ ನೋಡಿದ ಹಾಗಾಯಿತು." ಎಂದು ಮನಸ್ಸಿನಲ್ಲಿ ತೃಪ್ತಿಯನ್ನು ಪಡೆದು ವಿಶ್ರಮಿಸಿದ.

೧೩

ಸರಳೆಯು ಮಂಗಳೂರಿನ ಆಸ್ಪತ್ರೆಯಲ್ಲಿ ನರ್ಸಾಗಿ ಸೇರಿ ಈಗಾಗಲೇ ಒಂದು ತಿಂಗಳಾಗಿತ್ತು. ಅವಳ ನಡೆನುಡಿಯ ಬಗ್ಗೆ ಅಲ್ಲಿಯವರೆಲ್ಲರೂ ತಮ್ಮ ಮೆಚ್ಚುಗೆಯನ್ನು ಅವಳ ಬಗ್ಗೆ ವ್ಯಕ್ತಪಡಿಸಿದ್ದರು. ತಾನು ಆಗ ತಾನೇ ಸೇರಿದುದರಿಂದ ಸರಳೆಯೂ ಬಹಳ ನಿಷ್ಠೆಯಿಂದ ಕೆಲಸ ಮಾಡುತ್ತಿದ್ದಳು. ಆಸ್ಪತ್ರೆಯ ಹತ್ತಿರದಲ್ಲಿಯೇ ಅವಳು ಇರಲು ಒಂದು ಮನೆಯೂ ಅವಳಿಗೆ ಸಿಕ್ಕಿದ್ದಿತು. ರೋಗಿಗಳಂತೂ ಅವಳನ್ನು ತಮ್ಮ ಭಾಗಕ್ಕೆ ದೇವರೇನಾದರೂ ಒಳ್ಳೆಯದಾಗಬೇಕೆಂಬ ಆಸೆಯಿಂದ ಕಳುಹಿದನೇನೋ ಎಂಬ ಭಾವನೆ ಬೇರೂರಿತ್ತು.

ಒಂದು ದಿನ ಹಾಗೆಯೆ ಎಲ್ಲಾ ಬೆಡ್‌ಗಳ ಬಳಿಗೂ ಹೋಗಿ ನೋಡಿ ಬರುತ್ತಿರುವಾಗ ಅವಳಿಗೆ ಹೊಸದಾಗಿ ಗಡ್ಡ ಬೆಳೆದು ಕ್ಷೀಣವಾದ ದೇಹವುಳ್ಳ ಒಬ್ಬ ರೋಗಿಯನ್ನು ಕಂಡು ಆಶ್ಚರ್ಯವಾಯಿತು. ಅವನನ್ನು ಹಿಂದೆಯೆಲ್ಲೋ ನೋಡಿದಂತೆ ಅವಳಿಗೆ ನೆನಪಾಗುತ್ತಿತ್ತು. ರೋಗಿ ನಿದ್ರೆ ಮಾಡುತ್ತಿದ್ದ. ಅವನು ನಿದ್ರೆ ಮಾಡಲಿ ಎಂದು ತನ್ನ ಆರಾಮು ಕೋಣೆಯಲ್ಲಿ ಕುಳಿತುಕೊಂಡಿದ್ದಳು.

ಡಾಕ್ಟರರು ಬಂದಾಗ ಅವಳು ಎದ್ದು ಮುಂದೆ ನಡೆದಳು. ನಡೆಯುತ್ತಾ ಬಂದ ರೋಗಿಯು ಒಬ್ಬ ಭಿಕ್ಷುಕನೆಂದೂ ಅವನಿಗೆ ಟೈಫಾಯಿಡ್ ಆಗಿರುವುದೆಂಬುದನ್ನೂ ಅರಿತು ಆಕೆ ತನ್ನ ಕೆಲಸದಲ್ಲಿ ನಿರತಳಾದಳು.

ಹಾಗೆಯೇ ಮತ್ತೆ ರೋಗಿಯ ಬಳಿಗೆ ನಡೆದು ಹೋದಳು. ಆಗ ಆ
ರೋಗಿ ಸರಳೆಯತ್ತ ದೈನ್ಯತೆ ತುಂಬಿದ ದೃಷ್ಟಿ ಬೀರಿದನು. ಆತನ ದೃಷ್ಟಿ
ಸರಳೆಯತ್ತ ನೆಟ್ಟು ನಿಂತಿತು—ಚಲಿಸಲಿಲ್ಲ. ಆತನ ಮೋರೆಯಲ್ಲಿ ಪರಿ
ಚಿತೆಯ ಕುರುಹುಗಳು ತೋರಿದುವು. ಮಾತಾಡಲು ಬಾಯಿ ತೆರೆದನು.
ಆತ—ಆದರೆ, ಆತನ ಬಾಯಿಯಿಂದ ಸ್ವರ ಹೊರಡಲಿಲ್ಲ.

ಆ ದೈನ್ಯತೆಯ ನೋಟ! ಸರಳೆಯ ಕರುಳಿಗೆ ಕೆಂಡ ಸುರಿದಂತಾ
ಯಿತು! ಮೊದಲೊಮ್ಮೆ ಸುಧಾಕರ ಆಕೆಯನ್ನು ಹಾಗೆ ದೈನ್ಯತೆಯಿಂದ
ನೋಡುತ್ತಾ ಆಕೆಯೊಡನೆ ಏನೋ ಪ್ರಾರ್ಥಿಸಿಕೊಂಡಿದ್ದ. ಅದರ ಅನಂತರ
ಅಂತಹ ಅನುಭವ ಸರಳೆಗೆ ಆಗಿರಲಿಲ್ಲ.

ಸುಧಾಕರ........ಹೌದು....ಅದು ಆತನದೇ ನೋಟ. ಹಾಗಾದರೆ
ಆ ರೋಗಿ ಸುಧಾಕರನೇ?

ಈ ಒಂದು ವರುಷದ ಅವಧಿಯಲ್ಲಿ ಸುಧಾಕರ ಆಕೆಯ ಮನಸ್ಸಿ
ನಿಂದ ಮರೆಯಾಗಿದ್ದ. ಅಂದೊಮ್ಮೆ ಆಕೆ ಆತನನ್ನು ಪ್ರೇಮಿಸಿದ್ದಳು.
ಆದರೆ ಆ ಪ್ರೇಮದ ಮೇಲೆ, ಮಾಸದ, ಸಿರಿವಂತಿಕೆಯ ಲೋಲುಪತೆಯ
ಧೂಳು ಕುಳಿತು ಅದನ್ನು ಮರೆಮಾಡಿತ್ತು. ಆ ಕಲುಷಿತ ಹೃದಯವನ್ನೇ
ಆಕೆ ರಮೇಶನಿಗೆ ಅರ್ಪಿಸುವ ಭರದಲ್ಲಿದ್ದಳು. ಆದರೆ ಆ ಸಂದರ್ಭದ
ಲ್ಲಿಯೇ ಸುಧಾಕರನ ದೈನ್ಯತೆಯಿಂದ ತುಂಬಿದ ಆ ನೋಟ ಅವಳನ್ನು
ಬೆರಗುಗೊಳಿಸಿತು.

ವಿಲಾಸದ ವಾತಾವರಣದಿಂದಾಗಿ ಆಕೆಯ ಮನಸ್ಸಿನಲ್ಲಿ ಮರೆ
ಯಾಗಿದ್ದ ಹಿಂದಿನ ನೆನಪುಗಳು ಆಕೆಗೆ ಈಗ ಒಂದೊಂದಾಗಿ ನೆನಪಾಗ
ತೊಡಗಿದುವು.

ಸರಳೆಯ ಮನಸ್ಸಿನಲ್ಲಿ ತಾಳಲಾರದ ತಳಮಳವುಂಟಾಗುತ್ತಿತ್ತು.
ಆಕೆಗೆ ತಡೆಯಲಾಗಲಿಲ್ಲ. ಡಾಕ್ಟರರು ಏನೋ ಸರಳೆಯೊಡನೆ ರೋಗಿಯ
ಆರೈಕೆಯ ವಿಷಯ ಹೇಳಿ ಹೊರಟುಹೋದರು. ಅವರು ಹೇಳಿದುದು
ಸರಳೆಯ ಕಿವಿಗೆ ಹೋಗಲಿಲ್ಲ. ಕಾತರದಿಂದ ಗದ್ಗದ ಸ್ವರದಲ್ಲಿ "ಸುಧಾಕರ
ಭಾವಾ!" ಎಂದು ನುಡಿದಳು.

ಕ್ಷೀಣನಗೆಯೊಂದು ಸುಧಾಕರನ ಮುಖದಲ್ಲಿ ಸುಳಿದು ಮರೆಯಾಯಿತು. ಮಾತಾಡಲು ಅವನಿಗೆ ಚೈತನ್ಯವಿರಲಿಲ್ಲ. ಒಂದೇ ಸವನೆ ಆತ ಸರಳೆಯನ್ನು ನೋಡುತ್ತಿದ್ದನು. ಆತನ ಬಳಲಿದ ಕಣ್ಣುಗಳಿಂದ ಕಂಬನಿಗಳ ಕಣಗಳು ಕೆಳಗುರುಳುತ್ತಿದ್ದುವು. ತನ್ನ ದಾರುಣ ಜೀವನದ ದುಃಖಗಳನ್ನೆಲ್ಲಾ ಆತ ಕಣ್ಣುಗಳ ಮೂಲಕವೇ ತಿಳಿಸುತ್ತಿದ್ದಂತೆ ಸರಳೆಗೆ ಭಾವನೆಯಾಗತೊಡಗಿತು.

ಚಿಕ್ಕಂದಿನಲ್ಲಿ ಸರಳೆ, ಸುಧಾಕರ ಮತ್ತು ರಮೇಶ— ಈ ಮೂವರು ಒಂದಿಗೆ ಬೆಳೆದವರು. ಆಗ ಸರಳೆ ತನ್ನ ಹೃದಯದ ಪ್ರೀತಿಯನ್ನು ಇಬ್ಬರಿಗೂ ಸಮನಾಗಿ ಹಂಚಿದ್ದಳು. ಅನಂತರ ರಮೇಶ ಮಂಗಳೂರಿಗೆ ನಡೆದನು— ಸುಧಾಕರನು ತನ್ನ ಮನೆಯವರ ಅಡ್ಡಿಯಿಂದಾಗಿ ಊರಲ್ಲಿದ್ದರೂ ಅಲ್ಲಿಯೇ ಇದ್ದ ಸರಳೆಯ ಗುಡಿಸಲಿಗೆ ಬರದೇ ಕುಳಿತ. ಹೀಗೆ ಆಕೆಯ ಕೌಮಾರ್ಯದಲ್ಲಿ ಸುಧಾಕರ ಮತ್ತು ರಮೇಶರಿಬ್ಬರ ಸಾಹಚರ್ಯವೂ ಆಕೆಗೆ ಇರಲಿಲ್ಲ. ಆದರೆ ಆಕೆಯ ತಾರುಣ್ಯದಲ್ಲಿ ಹಠಾತ್ತಾಗಿ ಇಬ್ಬರೂ ಒಂದೇ ದಿನ ಆಕೆಯೆಡೆಗೆ ಸಮಾಗಮಿಸಿದರು— ಆಕೆಯ ಬಾಳುವೆಯೊಡನೆ ಬೆರೆಯಲಿಚ್ಛಿಸಿದರು.

ಸರಳೆ ಬಡತನದ ದಾರುಣ ದುಃಖವನ್ನುಂಡುಂಡು ಬಳಲಿದ್ದಳು. ಆದುದರಿಂದ ಸಿರಿವಂತಿಗೆಯ ಸುಖವನ್ನು ಅನುಭವಿಸುವ ಉತ್ಕಟೇಚ್ಛೆ ಆಕೆಗೆ ಉಂಟಾಗಿತ್ತು. ಆದುದರಿಂದ ಅಂದು ಆಕೆ ರಮೇಶನ ಆಶ್ರಿತೆಯಾಗಲು ಮನಸ್ಸುಗೊಟ್ಟಳು— ಸುಧಾಕರನು ನಿರ್ಮಲ ಹೃದಯದಿಂದ ಅರ್ಪಿಸಿದ ಪ್ರೇಮಪಾತ್ರವನ್ನು ಕಾಲಿನಿಂದೊದೆದು ದೂಡಿಬಿಟ್ಟಳು. ಸಿರಿತನದ ಸುಖದ ಬಿಸಿಲುಗುದುರೆ ಆಕೆಯ ಕಣ್ಣು ಕಟ್ಟಿತ್ತು. ಅಲ್ಲದೆ, ಅದಕ್ಕೆ ಅನುಕೂಲವಾಗಿ ತಾಯಿಯ ಕೊನೆಯ ಮಾತೂ ಇತ್ತು. ಅಂತೂ ಅಂದು ಆಕೆ ರಮೇಶನ ಆಶ್ರಿತೆಯಾಗಿ ನಿಂತಳು.

ಮೊದಮೊದಲು ಸರಳೆ ಮತ್ತು ರಮೇಶರಲ್ಲಿ ಕೇವಲ ಸಹೋದರ ಸ್ನೇಹವಿತ್ತು. ಆದರೆ ತಾರುಣ್ಯದ ಕಾವಿನ ಮುಂದೆ ಅಂತಹ ಪೊಳ್ಳು ಕಲ್ಪನೆಗಳು ಎಷ್ಟು ಕಾಲ ಉಳಿಯಬಲ್ಲುವು? ರಮೇಶ ಸಿರಿವಂತನಾದ ಕಾರಣ ಸರಳೆಯ ಹೃದಯದಲ್ಲಿ ಆತನ ಬಗೆಗೆ ತುಂಬಿದ ಅಭಿಮಾನ

ವಿತ್ತು. ಆ ಅಭಿಮಾನ ಪ್ರೇಮವಾಗಿ ಮಾರ್ಪಡಲು ಹೆಚ್ಚು ಕಾಲ ಬೇಕಾಗಿರಲಿಲ್ಲ!

ಸುಧಾಕರ ಆಕೆಯಲ್ಲಿ ಪ್ರಣಯಯಾಚನೆ ಮಾಡಿದ್ದನು. ಆತನ ನಿರ್ಮಲ ಹೃದಯ, ಆ ಪ್ರೇಮ, ಆ ಕಣ್ಣಿನ ದೈನ್ಯತೆಯ ನೋಟ—ಆಗಾಗ ಆಕೆಯ ಹೃದಯವನ್ನು ಚುಚ್ಚುತ್ತಿತ್ತು. ಆಕೆ ಆತನಿಗಾಗಿಯೂ ಮರುಗಿದ್ದಳು ಅನೇಕ ಬಾರಿ, ಆದರೆ ಅಷ್ಟರಲ್ಲಿ ಆಕೆ ತನ್ನ ಸ್ವಾತಂತ್ರ್ಯವನ್ನು ಕಳೆದುಕೊಂಡು ಸಿರಿವಂತ ರಮೇಶನ ಆಶ್ರಿತೆಯಾಗಿದ್ದಳು.

ರಮೇಶನ ಆಶ್ರಿತೆಯಾಗಲೊಪ್ಪಿದಾಗ ಸರಳೆಯ ಹೃದಯ ಆತನನ್ನು ವರಿಸುವ ಹೊಂಗಸನು ಕಂಡಿತ್ತು. ಆದರೆ ಒಂದು ದಿನ ಅಕಸ್ಮಾತ್ತಾಗಿ ಆಕೆಗೆ ತಿಳಿಯಿತು—ರಮೇಶ ವಿವಾಹಿತನೆಂದು. ಆಗ ಆಕೆಯ ಎದೆಯ ಳಲು ಆ ದುಃಖದಲ್ಲಿ ಮರಳಿಯೊಮ್ಮೆ ಆಕೆಗೆ ಸುಧಾಕರನ ಆತ್ಮಾರ್ಪಣೆಯ ನೆನಪಾಗಿತ್ತು! ಮರಳಿ ಸುಧಾಕರನ ಬಳಿಗೆ ಹೋಗಲು ಆಕೆಯ ಮನ ಹಂಬಲಿಸಿತ್ತು! ಆದರೆ, ಅಷ್ಟರಲ್ಲಿ ಸುಧಾಕರ ಕಾಣೆಯಾಗಿದ್ದ. ಭಗ್ನಪ್ರೇಮಿಯಾದ ಸುಧಾಕರ ಊರು ಬಿಟ್ಟಿದ್ದ!

ರಮೇಶನೊಡನೆ ಸರಳೆಯ ಪ್ರೇಮಕ್ಕೆ ಸುಮಿತ್ರೆ ಬಂಡೆಕಲ್ಲಾಗಿ ಮಧ್ಯದಲ್ಲಿ ಬಂದುದರಿಂದ ಸರಳೆ ಜನತೆಯ ಸೇವೆಮಾಡುವ ವೇಷ ತೊಟ್ಟಳು. ಆದರೆ, ಅದು ಬರಿಯ ಆತ್ಮವಂಚನೆಯಾಗಿತ್ತು—ತನ್ನ ಹೃದಯದ ಹಿಡಿತವೇ ಆಕೆಗೆ ಇರಲಿಲ್ಲ. ಆಕೆಯ ವಂಚನೆ ಆಕೆಗೆ ತಿಳಿದು ಬರಲು ಹೆಚ್ಚು ಸಮಯಬೇಕಾಗಲಿಲ್ಲ. ಮರಳಿ, ರಮೇಶನ ಸಾಹಚರ್ಯ ಲಭಿಸಿದೊಡನೆಯೇ ಆಕೆಯ ಪ್ರೇಮಲತೆ ಮರಳಿಯೊಮ್ಮೆ ಕೊನರೊಡೆಯಿತು. ರಮೇಶನೂ ಕೂಡ ಅದಕ್ಕೆ "ಅಸ್ತು"ಗೊಟ್ಟಿದ್ದನು—ಏಕೋ ಸುಮಿತ್ರೆಯಲ್ಲಿ ಆತನ ಮನಸ್ಸು ಕುಂದನ್ನೆಣಿಸತೊಡಗಿತ್ತು! ಸುಮಿತ್ರೆ ಕಾಹಿಲೆಯಿಂದ ಮಲಗಿದ್ದಳು. ಆದುದರಿಂದ ರಮೇಶ ಮತ್ತು ಸರಳೆಯರ ಪ್ರೇಮದ ಈ ಕಣ್ಣುಮುಚ್ಚಾಲೆ ಆಟವನ್ನು ಕಂಡು ಕೇಳುವವರೇ ಇರಲಿಲ್ಲ.

ಆದರೆ, ಅದೇ ಕ್ಷಣದಲ್ಲಿ ಸರಳೆ ಅನಿರೀಕ್ಷಿತವಾಗಿ ಇಂದು ಸುಧಾಕರನನ್ನು ಕಾಣುವಂತಾಯಿತು. ಇದಂತೂ ಆಕೆಯ ಹಾಗೂ ರಮೇಶನ ಮಾರ್ಗದಲ್ಲಿ ತಂದೊಡ್ಡಿದ ಹೊಸತೊಂದು ತೊಡರಾಗಿ ಪರಿಣಮಿಸಿತ್ತು.

ಸರಳೆಯ ಅಂತರಂಗ ಬಿರುಗಾಳಿಗೆ ಸಿಕ್ಕಿದ ತರಗೆಲೆಯಂತೆ ತತ್ತರಿಸು ತ್ತಿದ್ದಿತು. ಮುಂಗಾಣದೆ ಸರಳೆ ಸುಧಾಕರನ ರುಗ್ನಶಯ್ಯೆಯಲ್ಲಿ ತಲೆಗೆ ಕೈಯೊತ್ತಿಕೊಂಡು ಕುಳಿತುಬಿಟ್ಟಳು. ಯೋಚನೆಯಂತೂ ಎಡೆಬಿಡದೆ ತಲೆ ಯಲ್ಲಿ ಸಾಗಿತ್ತು.

ತನ್ನ ಜೀವನದಲ್ಲಿ ಕಳೆದುಹೋದ ಘಟನೆಗಳನ್ನು ನೆನೆನೆಸೆಯುತ್ತಾ ಸರಳೆಯ ಕರುಳು ಮಿಡಿಯತೊಡಗಿತು. ಇದಲ್ಲವೆ ವಿಧಿಯ ವೈಚಿತ್ರ್ಯ!

ಇನ್ನು ಆಕೆಯ ಜೀವನದಲ್ಲಿ ಭವಿಷ್ಯದ ಬಗ್ಗೆ ಸುಗಮವಾದ ದಾರಿ ಕಾಣದಾಗಿತ್ತು. ಆಕೆಯ ಕಣ್ಣುಗಳೆದುರಿಗೆ ಶೂನ್ಯತೆ ತಿರುಗುತ್ತಿತ್ತು-- ಆಕೆಯ ಭಗ್ನಹೃದಯದ ದ್ಯೋತಕವಾಗಿ!

"ನರ್ಸ್, ನರ್ಸ್" ಎಂದು ಯಾರೋ ಕರೆಯುತ್ತಿದ್ದರು. ಆಕೆಗೆ ಎಚ್ಚರವಾದಾಗ ತಲೆಯೆತ್ತಿ ನೋಡಿದಳು ಸರಳೆ. ಅದೇ ಆ ಹಳೆಯ ರೋಗಿ ಕರೆಯುತ್ತಿದ್ದ ಆಕೆಯನ್ನು-"ಸಮಯವಾಯಿತು ನರ್ಸ್, ಇಂದೇನು ಮದ್ದು ಕೊಡುವುದಿಲ್ಲವೇ?"

ಸರಳೆ ತನ್ನ ವಿಮನಸ್ಕತೆಗೆ ತನಗೆ ತಾನೇ ನಾಚಿಕೊಂಡಳು. ಮರು ಮಾತಾಡದೆ ಎದ್ದು ಹೋಗಿ ಒಂದಿಷ್ಟು ಔಷಧವನ್ನು ತಂದು ಆತನ ಕೈಗೆ ಕೊಟ್ಟಳು. ಆತ ಔಷಧವನ್ನು ಒಂದಿಷ್ಟು ಗುಟುಕರಿಸಿ ನಗುತ್ತಾ ನುಡಿ ದನು—"ಯಾವಾಗಲೂ ಸಿಹಿಯಾದ ಔಷಧಿ ಕೊಡುತ್ತಿದ್ದಿರಿ. ಇಂದೇನು ಬದಲಿಹೋಯಿತೇ? ಕಹಿಯಿಂದ ಕುಡಿಯಲಾಗುವುದಿಲ್ಲವಲ್ಲಾ!"

ಸರಳೆ ನೋಡಿದಳು. ಆತನಿಗೆ ಕೊಟ್ಟ ಔಷಧ ನಿಜವಾಗಿಯೂ ಬದಲಿತ್ತು. ಆದರೂ ಆತನೆದುರು ತಪ್ಪನ್ನೊಪ್ಪಿಕೊಳ್ಳಲು ಮನಸ್ಸಾಗಲಿಲ್ಲ ಆಕೆಗೆ. ಹಾಗೆಯೇ ನುಡಿದಳು—"ಇನ್ನು ಈ ಔಷಧ ಕೊಡಬೇಕೆಂದು ಡಾಕ್ಟರರು ಹೇಳಿದ್ದಾರೆ!"

"ಯಾಕಂತೆ? ಹ್ದು....ಹ್ದು........ಕಹಿ ಕುಡಿಯಲಾಗುವುದಿಲ್ಲ. ಆ ಮೊದಲಿನ ಸಿಹಿ ಮದ್ದನ್ನೇ ಒಂದಿಷ್ಟು...." ನಸುನಗುನಗುತ್ತಾ ನುಡಿದನು ಅವನು.

ಆ ರೋಗಿ ಒಂದು ಕ್ಷಣ ತೆಪ್ಪಗಾಗಿ ಅನಂತರ ಅದೇ ಅಸಹ್ಯ ನಗು ವನ್ನು ತಂದುಕೊಂಡು ನುಡಿದನು—

"ಹ್ಹು....ಹ್ಹು.......ಮುದ್ದಂತೂ ಕಹಿಯಾದುದನ್ನು ಕೊಟ್ಟಿರಿ. ಆದರೆ ಮೊದಲು ಮುಖದಲ್ಲಿರುತ್ತಿದ್ದ ಆ ಸಿಹಿ ನಗುವಿಗೂ ಸೊನ್ನೆ ಸುತ್ತಬೇಕೇ? ಕಹಿ ಮೋರೆ. ಒಂದಿಷ್ಟು ನಗಬಾರದೇ? ಮನಸ್ಸಿಗಾದರೂ ಕೊಂಚ ಆಹ್ಲಾದ...."

ಆ ಕಾಮುಕ ರೋಗಿ ಹೇಳುತ್ತಲೇ ಇದ್ದ—"ಆ ಹೊಸ ರೋಗಿ ಬಂದೊಡನೆಯೇ ಮನಸ್ಸೆಲ್ಲಾ ಅವನೊಬ್ಬನ ಕಡೆಗೇ ಹರಿಯಬೇಕೇ? ನೋಡಬಾರದೇ? ಆತನ ಹಾಸಿಗೆಯಲ್ಲಿಯೇ ಕುಳಿತುಕೊಳ್ಳುವಿರಿ'........... ನಮ್ಮನ್ನೆಲ್ಲಾ ಮರೆತುಬಿಟ್ಟರೆ ಹೇಗೆ?......."

ಸರಳೆಗೆ ಸಹಿಸಲಾಗಲಿಲ್ಲ. "ಬಾಯ್ಮುಚ್ಚು ನಾಯಿ!" ಎಂದು ಗರ್ಜಿಸುತ್ತಾ ಮೇರೆವಿಾರಿದ ಕೋಪದಿಂದ ಆತನ ಕೆನ್ನೆಗೊಂದು ಏಟು ಹೊಡೆದು ಆ "ವಾರ್ಡಿ"ನಿಂದ ಹೊರಗೆ ನಡೆದುಬಿಟ್ಟಳು. ಆ ರೋಗಿ ಪೆಚ್ಚುಗಟ್ಟಿದನು!

ಸರಳೆಗೆ ಈಗ ಅನುಭವವಾಗತೊಡಗಿತ್ತು—ಸಮಾಜಸೇವೆಯೆಂದರೆ ಬಾಯಿಮಾತಲ್ಲ—ಅದಕ್ಕಿಳಿದರೆ ವಿವಿಧ ಜನರ ಹಲವು ಮಾತುಗಳನ್ನು ಕೃತಿಗಳನ್ನು ಸಮಾಧಾನ ಚಿತ್ತದಿಂದ ತಾಳಿಕೊಳ್ಳಬೇಕು ಎಂದು. ಸಮಾಜ ದಲ್ಲಿ ಕಾಮುಕರು ವಂಚಕರು, ಕಟುಕರು, ದುಷ್ಟರು, ಎಷ್ಟೋ ಮಂದಿ ಇದ್ದಾರೆ. ಆದರೆ ಸಜ್ಜನರು ಬೆರಳೆಣಿಕೆಯಷ್ಟೂ ಇಲ್ಲ! ಸಮಾಜಸೇವ ಕರ ಹೃದಯ ಎಲ್ಲವನ್ನೂ ಸಹಿಸುವಷ್ಟು ಸಹಸಾಶೀಲವಾಗಿರಬೇಕು.

ಸರಳೆಯ ಈ ವರ್ತನೆಯನ್ನು ಬಳಿಯ ಹಾಸಿಗೆಯಲ್ಲಿ ಮಲಗಿದ್ದ ಸುಧಾಕರ ನೋಡುತ್ತಿದ್ದನು— ಮರಳಿಯೊಮ್ಮೆ ಆತನ ಮುಖದಲ್ಲಿ ಕ್ಷೀಣ ನಗೆಯೊಂದು ಸುಳಿದು ಮರೆಯಾಯಿತು!

ಅವನಿಗಂತೂ ಸರಳೆಯ ಸ್ವಭಾವದ ಬಗ್ಗೆ ಪರಿಚಯವಿತ್ತಲ್ಲವೇ?

೧೪

ಸುಮಿತ್ರೆಯಂತೂ ಅಶಾಂತಿಯಿಂದ ಬಳಲಿ ಬಡವಾಗಿದ್ದಳು. ಜ್ವರಬಂದನಂತರವಂತೂ ಅವಳಿಗೆ ಏಳುವುದಕ್ಕೂ ಸಹ ಶಕ್ತಿಯಿರಲಿಲ್ಲ. ಈಗಂತೂ ಜ್ವರ ಇಲ್ಲದಿದ್ದರೂ ಅಶಕ್ತಿ ಅವಳನ್ನು ಅಲುಗಾಡಿಸದ ರೀತಿ

ಯಲ್ಲಿ ಕಾಡತೊಡಗಿತು. ತನ್ನ ಪತಿ ಹಾಗೂ ಆ ಸರಳೆಯ ವಿಷಯ ದಲ್ಲಿ ಅವಳ ಮನಸ್ಸು ಚಿಂತಿಸಿ ಚಿಂತಿಸಿ ಮತ್ತೂ ಮತ್ತೂ ಕರಗಿಸಿತು.

ಇದನ್ನು ಕಂಡು ಡಾಕ್ಟರರು—"ಬಹಳ ಎಚ್ಚರಿಕೆಯಿಂದ ಆರೈಕೆ ಮಾಡಬೇಕು. ಇಲ್ಲವಾದರೆ ಆಕೆ ಸುಖವಾಗಿ ಮೈ ಕಳೆದು ಏಳುವುದು ಕಷ್ಟವಿದೆ" ಎಂದು ರಮೇಶನನ್ನು ಎಚ್ಚರಿಸುತ್ತಿದ್ದರು. ಆದುದರಿಂದ ರಮೇಶ ಈಗೀಗ ಸುಮಿತ್ರೆಯ ಆರೈಕೆಯ ವಿಚಾರದಲ್ಲಿ ಮನಸ್ಸು ಕೊಡತೊಡಗಿದ್ದನು. ಅವನ ಅಂತರಾತ್ಮ ಅವನಿಗೆ ಹೇಳಿ ಎಚ್ಚರಿಸುತ್ತಿತ್ತು–"ಆಕೆ ನಿನ್ನ ಬಾಳಗೆಳತಿ. ಆಕೆಯನ್ನು ಈ ವೇಳೆಯಲ್ಲಿ ಆರೈಕೆ ಮಾಡುವುದು ನಿನ್ನ ಕರ್ತವ್ಯ. ಇಲ್ಲವಾದರೆ ನೀನು ಅಪರಾಧಿಯಾಗುವೆ. ಆಕೆಗೆ ನಿನ್ನ ಮೇಲಿರುವ ಪ್ರೇಮ ಅಪಾರ. ಆ ಪ್ರೇಮಕ್ಕೆ ನೀನು ಪುರಸ್ಕಾರ ಕೊಡಲೇ ಬೇಕು—ದ್ರೋಹ ಬಗೆದರೆ ನೀನು ನರಕಕ್ಕೆ ಹೋಗುವೆ!........"

ಸರಳೆ ಹಗಲು ಆಸ್ಪತ್ರೆಗೆ ತನ್ನ ಕೆಲಸಕ್ಕೆ ಹೋಗಿರುವಾಗ'ರಮೇಶ ಸುಮಿತ್ರೆಯ ಹಾಸಿಗೆಯ ಬಳಿಯಲ್ಲಿಯೇ ಕುಳಿತು ಅವಳನ್ನು ಉಪಚರಿಸು ತ್ತಿದ್ದನು. ಆದರೆ ಸಂಜೆ ಮನೆಗೆ ಬಂದ ಸರಳೆ ಸಂಜೆಯ ವಾಯುವಿಹಾ ರಕ್ಕೋ, ಸಿನೇಮಾಕ್ಕೋ, ನಾಟಕಕ್ಕೋ ಆತನನ್ನು ಕರೆದಳೆಂದರೆ, ಆಕೆಯ ಕರೆಗೂ ಆತ "ಒಲ್ಲೆ" ಎನ್ನುತ್ತಿದ್ದಿಲ್ಲ. ಅವನ ಮನಸ್ಸಿನ ಇಬ್ಭಾಗಗಳಲ್ಲಿ ಸರಳೆ ಮತ್ತು ಸುಮಿತ್ರೆ ನಿಂತಿದ್ದರು. ಅವನ ಆಸಕ್ತಿ ಒಮ್ಮೆ ಅಲ್ಲಿಗೆ ಇಲ್ಲಿಗೆ ಎಂದು ತೂಗುಯ್ಯಾಲೆಯಂತೆ ಓಲಾಡುತ್ತಿತ್ತು.

ಸರಳೆಯ ಮನಸ್ಸಿಗೂ ನೆಮ್ಮದಿಯಿರಲಿಲ್ಲ. ಒಮ್ಮೆ ರಮೇಶನ ಕುರಿತು ಇನ್ನೊಮ್ಮೆ ಸುಧಾಕರನ ಕುರಿತು. ಆಕೆಯ ಮನಸ್ಸು ಚಿಂತಾಪೂರಿತ ವಾಗಿಯೇ ಇತ್ತು. ಸುಧಾಕರನೂ ಆಕೆಯ ಮನದಿಂದ ಮಾಸಿಮರೆ ಯಾಗಲೊಲ್ಲ. ಅಂತೂ ಅವಳ ಪರಿಸ್ಥಿತಿ ವಿಚಿತ್ರ.

ಆಸ್ಪತ್ರೆಯಲ್ಲಿ ಸುಧಾಕರನನ್ನು ಚೆನ್ನಾಗಿಯೇ ಆರೈಕೆಮಾಡುತ್ತಿ ದ್ದಳು ಸರಳೆ. ಸುಧಾಕರ ದಿನದಿನಕ್ಕೆ ಆರೋಗ್ಯ ಹೊಂದುತ್ತಾ ಬರುತ್ತಿದ್ದನು. ಅಂತೆಯೇ ರಮೇಶನೂ ಕೂಡ ಸುಮಿತ್ರೆಯನ್ನು ಚೆನ್ನಾಗಿ ಆರೈಕೆ ಮಾಡುವುದರಲ್ಲಿ ನಿರತನಾಗಿದ್ದನು. ಆಕೆಯೂ ಆರೋಗ್ಯ ಪಡೆ ಯುತ್ತಿದ್ದಳು.

ಆಸ್ಪತ್ರೆಯಲ್ಲಿ ಸುಧಾಕರನನ್ನು ಕಂಡಂದಿನಿಂದ ಸರಳೆಯಲ್ಲಿ ಅನೇಕ ವಿಚಾರಗಳ ಕೋಲಾಹಲವುಂಟಾಗಿತ್ತು. ಅಂದಿನಿಂದ ಆಕೆ ಮೊದಲಿನಂತೆ ರಮೇಶನನ್ನು ವಿಹಾರಗಳಿಗೆ ಕರೆದೊಯ್ಯುವುದನ್ನು ಕಡಿಮೆಮಾಡಿದ್ದಳು. ಆಕೆಯ ಗುಪ್ತಗಾಮಿನೀ ಹೃದಯ ಯಾವ ದಾರಿ ಹಿಡಿದಿತ್ತೋ ಎಂಬುದೇ ರಮೇಶನಿಗೆ ನಿತ್ಯ ಚಿಂತೆಯಾಯಿತು.

ರಮೇಶನ ಹೃದಯ ಸರಳೆಗೆ ಒಲಿದುದರಿಂದ ಸುಮಿತ್ರೆಯ ಭವಿಷ್ಯಕ್ಕೆ ಮಸಿಯ ಗೆರೆಯೆಳೆದಂತೆಯೇ ಆಗಿತ್ತು. ಆದುದರಿಂದ ಸುಮಿತ್ರೆಯ ಹೃದಯ ಮಂಥನವೇನೂ ಕಡಮೆಯಾಗಿರಲಿಲ್ಲ. ಆ ಚಿಂತನೆಯಿಂದಲೇ ಆಕೆಯ ಕಾಯಿಲೆ ಬಲಿದುದು ಅಲ್ಲದೆ ಆಕೆ ಕಾಯಿಲೆ ಬೀಳಲೂ ಕಾರಣವೂ ಆಗಿತ್ತು!

ಸುಮಿತ್ರೆಗೆ ತಿಂಗಳಾಗುತ್ತಾ ಬರುತ್ತಿತ್ತು. ಆಕೆ ಅದೇ ರೀತಿ ಕಾಯಿಲೆಯಿಂದಿದ್ದರೆ ಮುಂದಿನ ಗತಿಯೇನೆಂಬ ಚಿಂತೆ ಒಮ್ಮೊಮ್ಮೆ ರಮೇಶನ ಮನಸ್ಸಿನಲ್ಲಿ ಮೂಡುವುದು. ಆದರೆ, ಸರಳೆಯ ನೆನಪಾದೊಡನೆಯೇ ಆತನು ಎಲ್ಲವನ್ನೂ ಮರೆತು ಬಿಡುತ್ತಿದ್ದನು!

ಒಂದು ದಿನ ಸುಮಿತ್ರೆಯ ಹಾಸಿಗೆಯ ಬಳಿಯಲ್ಲಿ ರಮೇಶನು ಕುಳಿತುಕೊಂಡಿದ್ದಾಗ ಸುಮಿತ್ರೆ ಆತನ ಕೈಯನ್ನು ತನ್ನ ಕೈಯಲ್ಲಿ ಹಿಡಿದುಕೊಂಡು ಕೇಳಿದಳು—"ನೀವು ಸರಳೆಯ ವಿಚಾರವಾಗಿ ಯೋಚಿಸಿದಿರಾ?"

ಸುಮಿತ್ರೆ ಯಾವ ಅರ್ಥದಲ್ಲಿ ಹೇಳಿದಳೆಂದು ತಿಳಿದುಕೊಳ್ಳಲಾಗಲಿಲ್ಲ ರಮೇಶನಿಂದ.

ಆತ ಕೇಳಿದನು—"ಯಾಕೆ?"

"ಮತ್ತೇನು ಮಾಡುವಿರಿ ಆಕೆಯನ್ನು?"

"ಆಕೆ ನರ್ಸ್ ಆಗಿಕೊಂಡಿದ್ದು ಜನತೆಯ ಸೇವೆ ಮಾಡುವಳಂತೆ."

"ಹೂ........ಅದೆಲ್ಲಾ ಸೋಗು. ಅಂದು ನೀವೇ ಹೇಳುತ್ತಿದ್ದಿರಿ—ಆಕೆಯನ್ನು ಯಾರಾದರೂ ಯೋಗ್ಯನೊಬ್ಬನಿಗೆ ಮದುವೆಮಾಡಿ ಕೊಡಬೇಕೆಂದು."

"ಆದರೆ ಆಕೆ ಒಪ್ಪುವುದಿಲ್ಲವಲ್ಲ!"

"ಮತ್ತೇನು ಮಾಡುವಳಂತೆ! ಆಕೆ—ಇತರರ ಬಾಳುವೆಯ ಹೊಳೆಯಲ್ಲಿ ಬಂಡೆಗಲ್ಲಾಗುವಳೇ" ಎನ್ನುತ್ತಾ ಸುಮಿತ್ರೆ ಚುಚ್ಚು ನೋಟದಿಂದ ರಮೇಶನನ್ನು ನೋಡತೊಡಗಿದಳು.

ಸುಮಿತ್ರೆ ಮತ್ತೂ ನುಡಿದಳು—"ಆಕೆಯನ್ನು ಹೀಗೇ ಬಿಡುವುದು ಯಾವ ದೃಷ್ಟಿಯಿಂದಲೂ ಒಳ್ಳೆಯದಾಗಿ ತೋರುವುದಿಲ್ಲ. ಆಕೆ ತಾನೂ ಕೆಡುವುದಲ್ಲದೆ ಇತರರನ್ನೂ ಕೆಡಿಸ ಹೊರಟರೆ? ಆಕೆ ಕೆಟ್ಟ ದಾರಿಗೆ ಬೀಳುವ ಮೊದಲು ಆಕೆಯನ್ನು ಹಾದಿಗೆ ಹಚ್ಚಿರಿ." ಆಕೆಯ ಕಣ್ಣುಗಳಲ್ಲಿ ಆಶೆಯ ಬೆಳಕು ಹೊರಹೊಮ್ಮುತ್ತಿತ್ತು! ಚಿಂತೆ ಕೋಪಗಳೆರಡೂ ರಮೇಶನ ಎದೆಯಲ್ಲಿ ಉರಿಯುತ್ತಿದ್ದುವು. ಆತ "ಹೂಂ" ಎಂದನು ಮಾತ್ರ, ಮಾತನಾಡಲು ಧೈರ್ಯವಿರಲಿಲ್ಲ. ಮೋಹದ ಬಲೆಯಲ್ಲಿ ಸಿಕ್ಕಿಬಿದ್ದಾಗ ಧೈರ್ಯವಾದರೂ ಹೇಗೆ ಬಂದೀತು?

೧೫

ಮನೆಯಲ್ಲಿ ರಮೇಶನ ಚಿಂತೆ, ಆಸ್ಪತ್ರೆಯಲ್ಲಿ ಸುಧಾಕರನ ಚಿಂತೆ–ಹೀಗೆ ಸರಳೆಯ ಮನಸ್ಸು ಯಾವಾಗಲೂ ಚಿಂತೆಯಲ್ಲಿಯೇ ಮುಳುಗಿ ಹೋಗಿತ್ತು. ಆಸ್ಪತ್ರೆಯಲ್ಲಿ ತನ್ನ ಕರ್ತವ್ಯವೆಂದು ಸರಳೆ ಪರಿಶ್ರಮ ವಹಿಸಿ ಸುಧಾಕರನ ಆರೈಕೆ ನಡೆಸಿದಳು. ಆದುದರಿಂದ ಸುಧಾಕರ ಆರೋಗ್ಯ ಪಡೆಯುಹತ್ತಿದನು. ಅವಳು ತನ್ನ ಕೆಲಸದ ಬಗ್ಗೆ ಮೊದಲಿನಷ್ಟು ಆತುರವನ್ನು ತೋರಿಸುತ್ತಿರಲಿಲ್ಲವಾದರೂ ತನ್ನ ಕೆಲಸಕ್ಕೆ ವಂಚನೆಯನ್ನು ಮಾಡಲಿಲ್ಲ.

ಸುಧಾಕರ ಸಂಪೂರ್ಣ ಆರೋಗ್ಯವನ್ನು ಪಡೆಯಲು ಎರಡು ತಿಂಗಳುಗಳ ಕಾಲ ಬೇಕಾಯಿತು. ಖಾಹಿಲೆಯಿಂದ ಮಲಗಿದ್ದ ಆತನಿಗೆ ಆಸ್ಪತ್ರೆಯಿಂದ ಬಿಡುಗಡೆಯಾಗಿ ಸ್ವತಂತ್ರ ವಾತಾವರಣದಲ್ಲಿ ಕಾಲಿಟ್ಟಾಗ ಅಪರಿಮಿತ ಆನಂದವಾಯಿತು. ಆದರೆ ಸರಳೆಗೆ ಆವನ ವಿರಹದಿಂದ ಅತೀವ ವೇದನೆಯಾಗತೊಡಗಿತು. ಸುಧಾಕರ್ರ ಬಂದ ದಿನದ ಘಟನೆಯ ನೆನಪಾಗಿ ಸರಳೆಯ ಮೈ ಉರಿದು ಹೋಗುತ್ತಿತ್ತು!

ಸುಧಾಕರ ಹೊರಟು ನಿಂತಾಗ ಸರಳೆಯೊಡನೆ—"ಸರಳಾ! ನಾನು ಪುನಃ ಬದುಕಿದುದು ನಿನ್ನ ದಯೆಯಿಂದ ಹಾಗೂ ನಿನ್ನ ಸೇವೆಯಿಂದ.

ಮೊದಲೂ ನಿನ್ನದಾಗಿತ್ತು ಈ ಜೀವ. ಈಗಲೂ ನಿನ್ನದಾಗಿದೆ. ನಿನ್ನ ಉಪಕಾರ........ಅದು ಉಪಕಾರವಲ್ಲ—ನಿನ್ನ ದಯೆ!....ಸರಳಾ ಆದರೂ ನಿನ್ನೊಡನೆ ಒಂದಿಷ್ಟು ಮಾತಾಡಲಿದೆ........?" ಎಂದು ಅವನು ನುಡಿಯು ವಷ್ಟರಲ್ಲಿಯೇ

"ಏನು—ಹೇಳು!" ಎಂದು ಆತುರದಿಂದ ಕೇಳತೊಡಗಿದಳು.

"ಆದರೆ ಅದನ್ನು ಹೇಳಲು ಇದು ಯೋಗ್ಯ ಸ್ಥಳವಲ್ಲ. ಸಾಯಂ ಕಾಲ ಬಾವುಟೆಗುಡ್ಡೆಯ ಬಳಿಗೆ ಬರುವೆಯಾ?"

ಸರಳೆ "ಹೂಂ" ಎಂದು ಒಪ್ಪಿಕೊಂಡಳು. ಸುಧಾಕರನಿಗೆ ಏನು ಹೇಳುವುದಿದ್ದೀತೋ ಎಂಬ ಕುತೂಹಲ ತುಂಬಿತ್ತು ಆಕೆಯೆದೆಯಲ್ಲಿ. ಮತ್ತೆ ಏನೋ ನೆನಪಾಗಿ "ಸುಧಾಕರಾ! ಸುಧಾಕರಾ!" ಎಂದು ಕರೆಯು ತೊಡಗಿದ್ದಳು. ಆದರೆ ಆತನು ಆಸ್ಪತ್ರೆಯ ಆವಾರವನ್ನು ದಾಟಿ ಹೊರ ಗಿನ ಅಪಾರ ಜನಸಂದಣಿಯಲ್ಲಿ ಸೇರಿ ಹೋಗಿ ಕಾಣದಾಗಿದ್ದನು.

ಸರಳೆಯು ಮನದಲ್ಲಿ ಆ ದಿನವಿಡೀ ತಾನು ಸುಧಾಕರ ಹೇಳಿದಲ್ಲಿಗೆ ಹೋಗಲೋ ಹೋಗದಿರಲೋ ಎಂಬುದಾಗಿ ಚಿಂತಿಸತೊಡಗಿದ್ದಳು. ಅಂತೂ ಒಮ್ಮೆ ಮರೆತ ಸುಧಾಕರನ ನೆನಹು ಆಕೆಯ ಮನದಲ್ಲಿ ಮತ್ತೊಮ್ಮೆ ಜಾಗೃತವಾಗಿತ್ತು.

"ಅಲ್ಲಿಗೆ ಹೋದರೆ....ಸುಧಾಕರ ಏಕೆ ಕರೆದಿರಬಹುದು? ಇನ್ನೊಮ್ಮೆ ತನ್ನಲ್ಲಿ ಪ್ರಣಯ ಯಾಚನೆಯನ್ನು ಮಾಡಲೇ?" ಎಂದು ಆಕೆಯ ಮನ ಸ್ಸಿನಲ್ಲನ್ನಿಸುತ್ತಿತ್ತು.

"ಏನೇ ಆಗಲಿ, ಹೋಗುವುದಂತೂ ನ್ಯಾಯ. ಆತನ ಮುಂದಿನ ನಿರ್ಧಾರವನ್ನು ತಿಳಿಯಬೇಕಾದುದು ನನ್ನ ಕರ್ತವ್ಯ" ಎಂಬ ಆಸೆ ಇನ್ನೊಮ್ಮೆ ಅವಳಲ್ಲಿ ಉಂಟಾಯಿತು. ಅಂತೂ ಸಾಯಂಕಾಲ ಸರ ಳೆಯ ಕಾಲುಗಳು ಅವಳನ್ನು ಬಾವುಟೆಯ ಗುಡ್ಡೆಯತ್ತ ಒಯ್ಯ ತೊಡಗಿ ದುವು.

ಸುಧಾಕರನು ಅಲ್ಲಿ ಆಕೆಗಾಗಿ ಕಾದು ಕುಳಿತಿದ್ದನು. ಆಕೆ ಯನ್ನು ಕಂಡೊಡನೆಯೇ "ನನ್ನ ಮಾತಿಗೆ ಮನ್ನಣೆ ಕೊಟ್ಟು ಬಂದೆ ಯಲ್ಲಾ—ಅದೇ ಒಂದು ಸಂತೋಷ" ಎಂದು ನಗುತ್ತಾ ಹೇಳಿದನು.

ಸರಳೆ ಕಿರುನಗೆಯನ್ನು ಬೀರಿದಳಷ್ಟೇ ಹೊರತು ಮಾತನಾಡಲಿಲ್ಲ. ಮೌನವಾಗಿ ಆತನ ಬಳಿ ಕಲ್ಲು ಬೆಂಚೊಂದರ ಮೇಲೆ ಕುಳಿತಳು. ಸುಧಾಕರ ಪುನಃ ಕೇಳಿದನು—"ಸರಳಾ, ನಿನ್ನ ಅಣ್ಣನಿಗೆ ಗೊತ್ತೇ ನನ್ನ ಸುದ್ದಿ?"

ಆಶ್ಚರ್ಯದಿಂದ ಸರಳೆ ಕೇಳಿದಳು—"ಯಾರಿಗೆ?"

"ನಿನ್ನ ಅಣ್ಣನಿಗೆ."

"ಅಣ್ಣ" ಕೇಳಿದ ತತ್‌ಕ್ಷಣ ಬೆರಗಾದಳು "ಯಾವ ಅಣ್ಣ?" ಎಂಬ ಪ್ರಶ್ನೆ ತಕ್ಷಣ ಮನಸ್ಸಿನಲ್ಲಿ ಮೂಡಿತು. ಅವನನ್ನೇ ದಿಟ್ಟಿಸಿ ನೋಡತೊಡಗಿದಳು.

"ರಮೇಶ ನಿನ್ನ ಅಣ್ಣನಾಗಬೇಕು—ತಿಳಿಯೆಯಾ?"

"ಬಾಲ್ಯದಲ್ಲಿಯೂ ಆತನನ್ನು 'ರಮೇಶಣ್ಣಾ' ಎಂದು ಕರೆಯುತ್ತಿದ್ದೆ. ಈಗಲೂ ಒಮ್ಮೊಮ್ಮೆ ಹಾಗೆಯೇ ಕರೆಯುತ್ತೇನೆ. ಅಷ್ಟೇ ತಾನೇ? ಅದರ ಹೊರತು ಆತ ನನಗೆ ಹೇಗೆ ಅಣ್ಣನಾಗಬೇಕು?"

"ನಿನಗೆ ತಿಳಿದಿಲ್ಲವೇ? ಎಂತಹ ಮೋಸವಾಯಿತು! ನೀನು ತಿಳಿದಿರುವಿಯೆಂದು ನಾನು ಗ್ರಹಿಸಿದ್ದೆ" ಎಂದ ಸುಧಾಕರ.

ಸರಳೆಯ ಮೌನವನ್ನು ನೋಡಿ ಮತ್ತೂ ಮುಂದುವರಿಸಿದ.

"ನೀನು ರಮೇಶನ ಒಡಹುಟ್ಟಿದ ತಂಗಿ. ನಿನ್ನ ಮತ್ತು ಆತನ ತಂದೆ ಒಬ್ಬನೆ!" ಎಂದನು ಸುಧಾಕರ. ಸರಳೆಗೆ ಆಗಂತೂ ವಿಪರೀತ ಆಶ್ಚರ್ಯವಾಯಿತು. ಆಕೆಯ ಮುಖ ವಿವರ್ಣವಾಗತೊಡಗಿತು.

"ರಮೇಶ....ತನ್ನ ಅಣ್ಣ....! ತನಗೂ ಆತನಿಗೂ ಬೇರೆ ಸಂಬಂಧವಿಲ್ಲ?" ಎಂದು ನಿರ್ಧರಿಸಿಕೊಂಡಳು ಆಕೆ. ಆಕೆಯ ಹೃದಯ ತನ್ನ ತಪ್ಪನ್ನು ನೆನಸಿ ಒಂದೇ ಸವನೆ ಬಡಿದುಕೊಳ್ಳಲಾರಂಭಿಸುತ್ತಿತ್ತು.

"ರಮೇಶ ಕೇವಲ ಒಂದು ವರ್ಷದ ಮಗುವಾಗಿರುವಾಗಲೇ ಆಕೆಯ ತಾಯಿ ತೀರಿಹೋದಳು. ಆದುದರಿಂದ ಆತನ ಪೋಷಣೆಗಾಗಿ ಆತನ ತಂದೆ ನಿನ್ನ ತಾಯಿಯನ್ನು ದಾದಿಯಾಗಿ ನಿಯಮಿಸಿದರು. ಆಗ ನಿನ್ನ ತಾಯಿಯೂ ವಿಧವೆಯಾಗಿದ್ದಳು. ನನ್ನ ತಂದೆ ಅದಕ್ಕೆ ಅಡ್ಡಿಪಡಿಸಿದರೂ ಕೇಳದೆ ಆಕೆ ಜಮೀನ್ದಾರರ ಮನೆಯಲ್ಲಿ ಏಕಾಕಿನಿಯಾಗಿ ಕೆಲ

ಸಕ್ಕೆ ಸೇರಿದಳು. ಅದೂ ಸ್ವತಂತ್ರ ಜೀವನದ ಕಲ್ಪನೆಗೋಸ್ಕರ. ರಮೇಶನ ತಂದೆ ಆಗಂತೂ ಪುನರ್ವಿವಾಹ ಮಾಡಿಕೊಳ್ಳಲಿಚ್ಛಿಸಲಿಲ್ಲ. ಜಮಿಾನ್ದಾರರಾದುದರಿಂದ ಹೆಣ್ಣು ಕೊಡಲು ಎಷ್ಟೋ ಮಂದಿ ಮುಂದೆ ಬಂದು ವಿಚಾರಿಸಿದರೂ ತಿರಸ್ಕರಿಸಿದ್ದರು. ಅವರಿಗೆ ಏನು ಭಾವನೆಯಾಯಿತೋ ಕಾಣೆ! ಅಂತೂ ಒಮ್ಮೆ ಎಲ್ಲರೂ ಕೂಡಿ ಮದರಾಸ್ ಪ್ರವಾಸ ಮಾಡಿ ಬಂದರು. ಬಂದದ್ದೂ ಆಯಿತು; ಅವರು ಹೆಚ್ಚು ಕಾಲ ಉಳಿಯಲಿಲ್ಲ. ನಿನಗೆ ಜನ್ಮವಿತ್ತ ಕೇವಲ ಕೆಲವು ವರ್ಷಗಳಲ್ಲಿಯೇ ಅವರು ತೀರಿಹೋದರು. ಆಗ ರಮೇಶನಂತೂ ಬೆಳೆದ ಹುಡುಗನಾಗಿದ್ದ. ನಾನೂ ಅಷ್ಟೇ ವರ್ಷದವನಾಗಿದ್ದೆ. ರಮೇಶನ ಸೋದರಮಾವ ಅಂದರೆ ಸುಮಿತ್ರೆಯ ತಂದೆ ಬಂದು ಜಮಿಾನಿನ ಅಧಿಕಾರವನ್ನು ತಮ್ಮ ಕೈಗೆ ತೆಗೆದುಕೊಂಡರು. ನಿನ್ನ ತಾಯನ್ನು 'ವ್ಯಭಿಚಾರಿಣಿ' ಎಂದು ತಿರಸ್ಕರಿಸಿ ಮನೆಯಿಂದ ಹೊರದೂಡಿದರು. ಅಂತೂ ಆ ಬಳಿಕ ಬಡವಳಾಗಿ ಕಾಲ ದೂಡಬೇಕಾಯಿತು; ಸಮಾಜದ ದೂಷಣೆಗೆ ಒಳಗಾಗಬೇಕಾಯಿತು."

"ಹಣವಿದ್ದು ಅವಳು ಜಮಿಾನ್ದಾರರ ಮನೆಯಲ್ಲಿ ನಲಿಯುತ್ತಿದ್ದಾಗ ಅವಳನ್ನು ಸಮಾಜದವರಲ್ಲಿ ಆದರಿಸದವರಿರಲಿಲ್ಲ. ಅವಳನ್ನು ಮರ್ಯಾದೆಯಿಂದ ಕಾಣದವರಿರಲಿಲ್ಲ. ಅವಳು ನಿನಗೆ ಜನುಮವಿತ್ತ ಸಮಯದಲ್ಲಿಯೂ ಜಮಿಾನ್ದಾರರ ಮಗುವೆಂದು ಎಲ್ಲೋ ಒಬ್ಬಿಬ್ಬರು ಬಿಟ್ಟು ನಿನ್ನ ತಾಯಿಯ ಸಂತೋಷಕ್ಕೆ ತಾವೂ ಭಾಗಿಗಳೆಂದುಸುರಿ ಸಕ್ಕರೆ ತಿನ್ನದವರಿರಲಿಲ್ಲ. ಆದರೆ ಅವಳು ಮನೆಯಿಂದ ಹೊರಬಂದ ಮೇಲೆ ಸ್ಥಿತಿ ಹೇಳಬಾರದು. ಸಮಾಜಕ್ಕೆ 'ಹೆದರಿ ನನ್ನ ತಂದೆಯೂ ಆ ತಂಗಿಯ ಸಂಸರ್ಗವನ್ನು ಬಿಟ್ಟಿದ್ದರು. ಅನಂತರ ಹೇಗೋ ನಮ್ಮ ಬಾಲ್ಯ ಬೇಗ ಬೇಗನೆ ಕಳೆದುಹೋಯಿತು ಸರಳಾ!"

"ಜಮಿಾನ್ದಾರನಾದ ರಮೇಶನಿಗೆ ಅವನ ಮಾವ ತನ್ನ ಮಗಳಾದ ಸುಮಿತ್ರೆಯನ್ನು ಒತ್ತಾಯದಿಂದ ಮದುವೆ ಮಾಡಿದರು. ಆಗ ರಮೇಶ ವಿರೋಧಿಸುವಷ್ಟು ಸಾಮರ್ಥ್ಯವನ್ನು ಹೊಂದಿರಲಿಲ್ಲ."

"ದೈವಲೀಲೆಯಿಂದ ಅಂದು ರಮೇಶ ಆ ಗಳಿಗೆಯಲ್ಲಿಯೇ ಬಂದು ಸೇರಿದ. ತಾನು ಮಗನಂತೆ ಸಲಹಿದ ರಮೇಶನ ಕೈಯಲ್ಲಿ ಅವನ ತಂಗಿ

ಯಾದ ನಿನ್ನನ್ನು ಕೊಟ್ಟು ಅತ್ತೆ ಕಣ್ಮುಚ್ಚಿದರು. ಅನಂತರ ನೀವು........
ಮಂಗಳೂರಿಗೆ ನಡೆದಿರಿ. ನೀನು ಮದ್ರಾಸಿಗೆ ಹೋಗಿ ದಾದಿಯ ಶಿಕ್ಷಣ
ಕಲಿತು ಬಂದೆಯಲ್ಲವೇ?"

"ಸರಳೆಗೆ ತನ್ನ ಗತಜೀವನದ ದಿನಗಳು ಒಂದೊಂದಾಗಿ ನೆನಪಾಗು
ತ್ತಿದ್ದುವು. ಕತೆ ಕೇಳುತ್ತಿದ್ದಂತೆಯೇ ಹೃದಯ ದುಃಖದಿಂದ ತುಂಬಿ
ಹೋಗಿ ಹೊರಹೊಮ್ಮಿ ಬರುವಂತಾಯಿತು. ಅಂತೂ ಸುಧಾಕರನೂ
ಆವಳ ಪರಿಸ್ಥಿತಿಗೆ ಮರುಕಪಡುತ್ತಾ ಮುಂದುವರಿಸಿದ.

"ನಾನು ಅಂದು ನಿನ್ನಲ್ಲಿ ಪ್ರೇಮಭಿಕ್ಷೆ ಬೇಡಿದುದು ನೆನಪಿದೆ
ಯಲ್ಲವೇ ಸರಳಾ? ನಿನ್ನಮೇಲೆ ನನಗೆ ಅಪಾರ ಪ್ರೇಮವಿತ್ತು. ನಿನ್ನಿಂದ
ತಿರಸ್ಕರಿಸಲ್ಪಟ್ಟು ಭಗ್ನಪ್ರಣಯಿಯಾಗಿ ನಾನು ಕುಸುಮಳ್ಳಿಯಿಂದ
ಹೊರಟೆ. ಅನಂತರ ಅಲೆಯುತ್ತಾ ಮಂಗಳೂರಿಗೆ ಬಂದೆ. ಕೈಯ್ಯ
ಲ್ಲಿದ್ದ ಕಾಸು ಮುಗಿದಿತ್ತು. ಬಟ್ಟೆಗಳು ಹರಿದು ಚಿಂದಿಚಿಂದಿಯಾಗ
ತೊಡಗಿದ್ದುವು. ಯಾವ ಉದ್ಯೋಗವೂ ಸಿಗಲಿಲ್ಲ ನನಗೆ. ಹೊಟ್ಟೆ
ತುಂಬಿಸುವುದಕ್ಕಾಗಿ ಉದ್ಯೋಗ ಹುಡುಕಲು ಅಲೆದಾಡಿದೆ. ಆಗ ರಮೇ
ಶನ ಮನೆಗೂ ಹೋಗಬೇಕಾಗಿ ಬಂತು."

ತಾನು ಮದ್ರಾಸಿನಲ್ಲಿ ಸುಧಾಕರನನ್ನು "ಕೂಲಿಕಾರ"ನೆಂದು ಕಡೆ
ಗಣಿಸಿದ ನೆನಪಾದಂತೆ ಸರಳೆಯ ಕಣ್ಣಿನಲ್ಲಿ ನೀರು ಉಕ್ಕಿಬರುತ್ತಿತ್ತು!

"ಹೊಟ್ಟೆಗೆ ಒಂದಿಷ್ಟು ಆಹಾರ ತೋರಿಸದೆ ಮಲಗಿದ ದಿನಗಳು
ಎಷ್ಟೋ ಆಗ ಇದ್ದುವು. ಅಂಗಡಿಗಳ ಜಗಲಿಯಲ್ಲಿ ರಾತ್ರಿ ನನ್ನರೀತಿಯ
ಇತರರೊಡನೆ ಮಲಗಬೇಕಾಗುತ್ತಿತ್ತು. ಹಾಗೆಯೇ ಒಂದು ಸಿನೆಮಾ
ಥಿಯೇಟರಿನ ಮುಂದುಗಡೆ ಇದ್ದ ಅಂಗಡಿಯ ಜಗಲಿಯಲ್ಲಿ ಒಂದು ದಿನ
ಮಲಗಿದ್ದಾಗ ಕಾರಿನಲ್ಲಿ ನಿನ್ನನ್ನು ಮತ್ತು ರಮೇಶನನ್ನು ಸಿನೆಮಾ ನೋಡಲು
ಬಂದವರನ್ನು ನೋಡಿದೆ. ಹಾಗೆಯೇ ನೋಡುತ್ತಾ ಕುಳಿತಿದ್ದೆ. ಅರ್ಧ
ಸಿನೆಮಾ ಮುಗಿಯುತ್ತಲೇ, ನೀವಿಬ್ಬರೂ ಕಾರಿನಲ್ಲಿ ಹೊರಟು ಹೋದು
ದನ್ನು ನೋಡಿದೆ. ನನಗೆ ಆದ ಬೇಸರ ಹೇಳಿತೀರದು. ಅಂದು ನೀವು ಅಣ್ಣ
ತಂಗಿಯರಂತಿರಲಿಲ್ಲ........"

ಸರಳೆಗೆ ಆ ದಿನದ ನೆನಪಾಯಿತು. ಆ ದಿನ!........ಮುಂದೆ ಯೋಚನೆ ಓಡಲಿಲ್ಲ. ಕಣ್ಣೀರುಸುರಿಯುತ್ತಲೇ ಇತ್ತು. ಅದನ್ನು ಒರೆಸಿಕೊಳ್ಳುವ ಚೈತನ್ಯವೂ ಆಕೆಗಿರಲಿಲ್ಲ.

"ಅನಂತರ ಒಂದು ತಿಂಗಳಿನಲ್ಲಿ ನಾನು ರೋಗಹಿಡಿದು ಆಸ್ಪತ್ರೆಯಲ್ಲಿ ಬಿದ್ದೆನು. ಆಗ ನೀನೇ ನನ್ನನ್ನು ಉಪಚರಿಸಿದೆ. ಈಗ ನಾನು ಆರೋಗ್ಯ ಪಡೆದಿರುವೆ. ಇನ್ನು ನನ್ನ ದಾರಿ ದೇಶಕ್ಕಾಗಿ ತೆರೆದಿದೆ." ಎಂದು ತನ್ನ ಕತೆ ಹೇಳಿ ಮುಗಿಸಿದನು ಸುಧಾಕರ.

ಸುಧಾಕರನ ಮುಖ ನೋಡುತ್ತಾ ಕಣ್ಣೀರು ಸುರಿಸುತ್ತಿದ್ದ ಸರಳೆ ಗಂತೂ ಏನೂ ತೋರದಾಯಿತು. ಏನು ಹೇಳಬೇಕೆಂಬುದೇ ಅವಳಿಗೆ ತೋಚಲಿಲ್ಲ. ಕೊನೆಗೆ "ಅಯ್ಯೋ ತಪ್ಪಾಯಿತು, ಕ್ಷಮಿಸು" ಎಂದು ಗದ್ಗದ ಸ್ವರದಲ್ಲಿ ನುಡಿಯತೊಡಗಿದಳು. ಇದನ್ನು ಕೇಳಿ ಸುಧಾಕರ ನಕ್ಕುಬಿಟ್ಟನು. "ಅಯ್ಯೋ ನಿನಗೆ ನಾನು ಕ್ಷಮೆ ನೀಡಲು ಹೇಗೆ ತಾನೇ ಆದೀತು? ಹೋಗಲಿ...............ಎಂದರೆ ತಪ್ಪನ್ನಾದರೂ ನೀನು ಏನು ಮಾಡಿರುವೆ ಸರಳಾ? ಇದು ನನ್ನ ನಿನ್ನ ತಪ್ಪಲ್ಲ. ಯಾರು ಯಾರನ್ನೂ ಕ್ಷಮಿಸುವ ಹಾಗೂ ಇಲ್ಲ"

ಸರಳೆ ಅದನ್ನು ಕೇಳಿ ಸ್ವಲ್ಪ ಸಮಧಾನಗೊಂಡಳು. ಸುಧಾಕರ ಮತ್ತೂ ಹೇಳತೊಡಗಿದ.

"ಸರಳಾ! ತಪ್ಪು ನಮ್ಮದಲ್ಲ. ನಮ್ಮನ್ನು ಬೆಳಸಿದ ಆ ಹಿರಿಯರದ್ದು. ಸಮಾಜದ ಬಲೆಗೆ ಬಿದ್ದು ನಮ್ಮನ್ನು ಹಾಳು ಮಾಡಿರುವ ಸಾಹಸ ವಂತೂ ಅವರದ್ದೇ ಆಗಿದೆ, ಇಂದು ಸಮಾಜ ಧನವಂತರ ಕಡೆಗೇ ನೋಡುತ್ತಿದೆ. ಧನವಂತರಾದರೊ ಮಾಡಿದ್ದೇ ನ್ಯಾಯ; ಅವರು ಹೇಳಿದ್ದೇ ಮಾತು; ಹೀಗಾಗಿ ಬಡವರ ಬಾಳು ಕಣ್ಣೀರ ಕೆರೆಯಲ್ಲಿ ತುಂಬಿಹೋಗಿದೆ. ಇಷ್ಟೇ ಅಲ್ಲ. ಶ್ರೀಮಂತರ ನೆರವಿನಲ್ಲಿದ್ದಾಗ ಸಮಾಜದ ಮುಂದೆ ತಪ್ಪು ಮಾಡುವುದನ್ನು ಕಂಡರೂ ಸಮಾಜಕ್ಕೆ ಅದನ್ನು ವ್ಯಕ್ತಪಡಿಸಲು ಧೈರ್ಯ ವಿಲ್ಲ. ಆದರೆ ಶ್ರೀಮಂತಿಕೆಯಿಂದ ದೂರವಾದರೆ ಅವರ ಜೀವನವನ್ನು ನಾಯಿಯ ಬಾಳಿಗಿಂತ ಕಡೆಯಾಗಿ ಕಾಣುವುದೂ ಈ ಸಮಾಜವೇ? ಸಿರಿವಂತಿಕೆಯ ಸೋಗಿನಲ್ಲಿ ನಲಿಯುವ ಈ ಸಮಾಜವನ್ನು ಸುಧಾರಿಸು

ವುದು ನಮ್ಮ ಕರ್ತವ್ಯ. ಅದೇ ನಾನು ಆಶಿಸುವ ಸಮಾಜಸೇವೆ!........ ಅದೇ ದೇಶಸೇವೆ ಸರಳಾ!"

ಸರಳೆಯ ಮುಖ ಗಂಭೀರವಾಗ ತೊಡಗಿತು. ಹೌದು, ತನ್ನ ಬಾಳು ಈ ಸಮಸ್ಯೆಯಲ್ಲಿ ಬಳಲುವುದಕ್ಕೆ ಇದೇ ಕಾರಣವೆಂದು ಅವಳ ಮನಸ್ಸಿನಲ್ಲಿ ಮೂಡತೊಡಗಿತು. ಅದಕ್ಕೆ ಪ್ರತಿಕ್ರಿಯೆ ಅಥವಾ ಪ್ರಾಯಶ್ಚಿತ್ತ ದೇಶಸೇವೆಗಾಗಿ........ಸಮಾಜಸೇವೆಗಾಗಿ ತನ್ನ ದೇಹವನ್ನರ್ಪಿಸುವುದೇ ಎಂದು ಮನಸ್ಸಿನಲ್ಲಿ ಸರಳೆ ನಿರ್ಧರಿಸಿದಳು. ಆದರೂ ಸುಧಾಕರನನ್ನೊಮ್ಮೆ ಕೇಳಬೇಕೆಂದಾಶಿಸಿದಳು.

"ಹಾಗಾದರೆ ನಾನು........ನಾನು ಏನುಮಾಡಲಿ ಸುಧಾಕರಾ?" ಕಾತರದಿಂದ ಕೇಳಿದಳು ಸರಳೆ.

"ನನ್ನೊಡನೇಕೆ ಕೇಳುತ್ತಿ ಸರಳಾ ಅದನ್ನು? ನೀನು ಸ್ವತಂತ್ರಳು. ನಿನ್ನ ಹುಟ್ಟು-ಹಕ್ಕಾದ ಆ ಸ್ವಾತಂತ್ರ್ಯವನ್ನು ಸಿರಿವಂತನಾದ ಆ ರಮೇಶನಾಗಲಿ ಇತರರೇ ಆಗಲಿ, ಯಾರೂ ಕಸಿದುಕೊಳ್ಳಲಾರರು. ನೀನು ಯಾರನ್ನಾದರೂ ಭಾಗ್ಯವಂತನನ್ನು ವಿವಾಹವಾಗಿ ಆದರ್ಶ ಗೃಹಿಣಿಯಾಗಿ ಬಾಳಿ ಒಬ್ಬನ ಮನೆ ಉದ್ಧರಿಸಬಹುದು. ಅಥವಾ ನನ್ನಂತೆ ಹತ್ತು ಜನ ಬಡವರ ಸೇವೆಮಾಡಿ ಸಮಾಜವನ್ನು ಉದ್ಧರಿಸಲು ಯತ್ನಿಸಬಹುದು. ಆದರೆ ಸಮಾಜಸೇವೆ ಸುಖದ ಮಾರ್ಗವಲ್ಲ—ಸಮಾಜದಲ್ಲಿ ಕಾಮುಕರಿದ್ದಾರೆ, ದುಷ್ಟರಿದ್ದಾರೆ, ಕಟುಕರಿದ್ದಾರೆ; ಸಜ್ಜನರು ಬಹಳ ಕಡಿಮೆ—ಇಲ್ಲವೆಂದರೂ ಸಲ್ಲುವುದು! ಸರಳಾ! ಪ್ರತಿ ಜನರಲ್ಲೂ ಕಾಮವಿದೆ, ಕ್ರೋಧವಿದೆ, ಲೋಭವಿದೆ, ಮೋಹವಿದೆ, ಮದವಿದೆ, ಮತ್ಸರವಿದೆ, ಜನರ ಬಳಿಸುಳಿಯುವುದು ವಿಷಸರ್ಪದ ಬಳಿಸುಳಿದಷ್ಟು ಅಪಾಯ. ಆದರೂ ನಮ್ಮ ಸೋದರ—ಸೋದರಿಯರಿಗಾಗಿ ನಾವು ದುಡಿಯಲೇ ಬೇಕು. ನೀನು ನರ್ಸ್ ಶಿಕ್ಷಣ ಪಡೆದಿರುವೆ—ಬಡ ಜನರನ್ನು ಉಪಚರಿಸಿ ಅವರ ಸೇವೆ ಮಾಡಬಹುದು. ಯಾವುದೂ ನಿನ್ನ ಇಷ್ಟ! ಯಾರ ಒತ್ತಾಯಕ್ಕೂ ನೀನು ಬೆಲೆಕೊಡ ಬೇಕಾಗಿಲ್ಲ!........ಹೇಳು. ಈಗ ಯಾವ ದಾರಿ ಹಿಡಿಯುವೆ ನೀನು?" ಆಸೆಗಣ್ಣಿನಿಂದ ಸುಧಾಕರ ಕೇಳಿದನು.

ಸರಳೆ ದೂರದಲ್ಲಿ ತೋರುತಿದ್ದ ಗಂಭೀರ ಸಾಗರವನ್ನು ನೆಟ್ಟ ದೃಷ್ಟಿಯಿಂದ ನೋಡುತ್ತಿದ್ದಳು—ಚಿಂತಾಪೀಡಿತವಾದ ತನ್ನ ಹೃದಯವನ್ನು ಅಷ್ಟು ಶಾಂತ ಗಂಭೀರವಾಗಿ ಮಾಡಬೇಕೆನ್ನುವಂತೆ!

೧೬

ಸುಮಿತ್ರೆಯು ನಿತ್ಯನಿತ್ಯಕ್ಕೆ ಗುಣಹೊಂದುತ್ತಿದ್ದಳು. ರಮೇಶನು ಸಮೀಪದಲ್ಲಿಯೇ ಕುಳಿತು ಆರೈಕೆಮಾಡುತ್ತಿದ್ದುದಂತೂ ಅವಳಿಗೆ ಉತ್ಸಾಹ ವನ್ನು ತರತೊಡಗಿತು. ಇದರಿಂದ ಅವಳ ಮುಖಭಾವ ಅರಳಿ ಹೋಗಿತ್ತು. ರಮೇಶನಿಗೆ ಇದರಿಂದ ಸ್ವಲ್ಪ ಬಿಡುವು ದೊರಕಿದಂತಾಯಿತು. ಆದರೆ ಸರಳೆಯ ವಿಷಯದಲ್ಲಿದ್ದ ಮೋಹ ಅವನನ್ನು ಕಾಡಿಸತೊಡ ಗಿತ್ತು. ಆದರೂ ಎಲ್ಲಿ ಮತ್ತೆ ಸುಮಿತ್ರೆಗೆ ಬೇನೆಯು ಬಹಳ ಹೆಚ್ಚಾಗಿ ಹೋಗುತ್ತದೋ ಎಂಬ ಭಾವನೆಯಿಂದ ಅಂಜಿ ಕುಳಿತಿದ್ದನು.

ಒಂದುದಿನ ಹಟಾತ್ತಾಗಿ "ಹೊಟ್ಟೆನೋವು" ಎಂದು ಸುಮಿತ್ರೆ ಹೊರಳಾಡತೊಡಗಿದಳು. ದಿಗ್ಭ್ರಾಂತನಾದ ರಮೇಶನು ಕೂಡಲೇ ಡಾಕ್ಟರರನ್ನು ಕರೆಸಿದ. ಡಾಕ್ಟರರೊಡನೆ ಸೂಲಗಿತ್ತಿ (ಮಿಡ್‌ವೈಫ್)ಯೂ ಬಂದಿದ್ದಳು. ಆಗ ರಮೇಶನಿಗೆ ತಿಳಿಯಿತು—ಸುಮಿತ್ರೆಯ ಹೊಟ್ಟೆನೋವು ಏಕೆಂದು!

ರಮೇಶನ ಮನಸ್ಸಿಗೆ ಒಮ್ಮೆ ಸಂತಸ, ಒಮ್ಮೆ ದುಃಖ ಒಮ್ಮೆ ಕಾತರ ಎಲ್ಲವೂ ಉಂಟಾಗುತ್ತಿತ್ತು. ಏನುಮಾಡಬೇಕೆಂದರಿಯದ ಸುಮಿ ತ್ರೆಯ ಕೋಣೆಯ ಎದುರಿನ ಕೋಣೆಯಲ್ಲಿ ಅತ್ತಿತ್ತ ಸುಳಿದಾಡುತ್ತಿದ್ದನು.

ಸರಳೆಯ ಮುಖ ಆಗಾಗ ನೆನಪಾಗುತ್ತಿತ್ತು. ಆ ನಗುಮುಖ! ಅದರ ಎದುರಿಗೆ ಸುಮಿತ್ರೆಯು ನಿಲ್ಲಬಲ್ಲಳೇ? ಅಲ್ಲದೆ, ಸುಮಿತ್ರೆಯು ಕಾಯಿಲೆಯಿಂದ ಕ್ಷೀಣಗೊಂಡು ಈಗ ಮತ್ತಷ್ಟು ಬಣ್ಣ ಗೆಟ್ಟಿದ್ದಳು! ಇದರಿಂದ ಅಂದೇಕೋ ರಮೇಶನಿಗೆ ಸರಳೆಯ ನೆನಪು ಮೇಲಿಂದ ಮೇಲೆ ಬರುತ್ತಿತ್ತು!

ಸುಮಿತ್ರೆ ಪ್ರಸವ ವೇದನೆಯಿಂದ ಹೊರಳಾಡುತ್ತಿದ್ದಳು. ಆಕೆಯ ನರಳಿಕೆ ಎಂತಹ ಕಲ್ಲೆದೆಯವರನ್ನೂ ಕರಗಿಸುವಂತಿತ್ತು. ರಮೇಶನ

ಮನಸ್ಸಿನಲ್ಲಿ ಯೋಚನಾಚಕ್ರ ತಿರುಗುತಿತ್ತು. "ಸುಮಿತ್ರೆ ಹಾಗೆಯೇ ಅಲ್ಲಿಯೇ ಸತ್ತುಹೋಗುವಳೇ? ಸುಮಿತ್ರೆ ಸಾಯುವಳೇ? ಸಾಯುವಳೇ?"

ರಮೇಶ ತನ್ನ ಎರಡು ಕೈಗಳಿಂದಲೂ ತನ್ನ ಹೃದಯವನ್ನು ಮುಟ್ಟಿ ನೋಡಿಕೊಂಡನು! "ಅಯ್ಯೋ ಎಂತಹ ಸ್ವಾರ್ಥ ಭಾವನೆ! ಬೇಡ....ಬೇಡ.... ಆ ರೀತಿಯ ಕೆಟ್ಟ ಯೋಚನೆಯೂ ಮನಸ್ಸಿನಲ್ಲಿ ಬೇಡ—ಪಾಪಿ ಹೃದಯವೇ!" ಎಂದುಕೊಂಡನು.

ರಮೇಶ ಅತ್ತಿಂದಿತ್ತ ಇತ್ತಿಂದತ್ತ ಹೆಜ್ಜೆಹಾಕುತ್ತಿದ್ದನು. ಅತನ ಮನಸ್ಸು ಆಗಾಗ ಮೋಹದೆಡೆಗೆ ಸಿಲುಕಿ ಸುಮಿತ್ರೆ ಹಾಗೆಯೇ ಸತ್ತರೆ... ಸರಳೆಯನ್ನು ಮದುವೆಯಾಗಲು....ಅಡ್ಡಿಯೇ ಇಲ್ಲದಂತಾಯಿತಲ್ಲಾ."

"ಸುಮಿತ್ರೆ ಬದುಕಲಿ—ಆಕೆ ಸಾಯುವುದೂ ಬೇಡ; ನಾನು ಸರಳೆಯನ್ನು ಮದುವೆಯಾಗುವುದೂ ಬೇಡ." ಎಂದು ರಮೇಶನ ಮನಸ್ಸಿನ ಭಾವನೆ ಮತ್ತೊಂದುಕಡೆಗೆ ಸೆಳೆಯಿತು.

"ಸರಳೆಯನ್ನು ಮದುವೆಯಾಗುವುದು ಬೇಡವೇ? ಎಂತಹ ಹುಚ್ಚು! ಆಕೆಯನ್ನು ಬಿಟ್ಟರೆ ಇನ್ನು ಅಂತಹವರು ಸಿಕ್ಕುವರೇ...."

"ಸುಮಿತ್ರೆಗೆ ದ್ರೋಹಬಗೆಯುವೆಯಾ? ಅವಳು ನಿನ್ನ ಬಾಳಗೆಳತಿಯಲ್ಲವೇ?"

"ಸರಳೆಯ ತಾಯಿಯು ಕಡೆಗಾಲದಲ್ಲಿ ನುಡಿದ ಮಾತನ್ನು........ ನೀನು ಆಕೆಯ ಒಡೆಯ....ಎಂದ ಮಾತನ್ನು ಮರೆಯುವೆಯಾ?........"

"ಇಲ್ಲ—ಇಲ್ಲ ಮರೆಯಲಾರೆ—ಆಕೆಯನ್ನು ತಿರಸ್ಕರಿಸಲಾರೆ."

"ಹಾಗಾದರೆ ಅದಕ್ಕಾಗಿಯೇ ಹೇಡಿಯಂತೆ ಆಕೆಯ ಸಾವನ್ನು ಬಯಸುತ್ತಿರುವೆಯಾ ನೀನು!"

"ಇಲ್ಲ....ಇಲ್ಲ....ಆಕೆಯ ಸಾವನ್ನು ನಾನು ಬಯಸುವುದಿಲ್ಲ. ಆಕೆಯ ಪ್ರೇಮಕ್ಕೆ ಪುರಸ್ಕಾರಕೊಡಬೇಕಾದುದು ನನ್ನ ಕರ್ತವ್ಯ."

ಕೋಣೆಯಲ್ಲಿ ಓಡಾಡುವಾಗ ಅತ್ತಿಂದಿತ್ತ ತಿರುಗುವಾಗ ಮನಸ್ಸಿನಲ್ಲಿ ಯೋಚನೆ ಹೀಗೆಯೇ ಸಾಗಿತ್ತು. "ಆದರೆ ಸರಳಾ?"

"ಹೌದು. ಆದರೆ ಸರಳಾ? ಆಕೆ ನಿನಗೆ ದೊರೆಯಲಾರಳಲ್ಲವೇ?"

"ಬೇಡ ಆಕೆ ಬೇಡ. ನನಗೆ ಸುಮಿತ್ರೆ ಸಾಕು! ನಾನು ಆಕೆಯ ಪ್ರೇಮಕ್ಕೆ ಪುರಸ್ಕಾರಕೊಡುವವನು."

"ಪುರ....ಸ್ಕಾ....ರ....ಯಾರಿಗೆ" ಎಂದು ಸರಳೆಯ ಮೂರ್ತಿ ಕೂಗಿ ಕೊಂಡಹಾಗಾಯಿತು. ತಲೆಯು ವಿಚಾರಸರಣಿಯಲ್ಲಿ ಸಿಲುಕಿಯಂತೂ ಬೆಂಡಾಗಿಹೋಯಿತು.

"ನಾನು ನಾನು ನಿನಗೆ ಬೇಡವೇ? ನನ್ನ ಪ್ರೇಮಕ್ಕೆ ನೀನು ಪುರಸ್ಕಾರ ನೀಡಲಾರೆಯಾ?" ಎಂದು ಸರಳೆಯು ಬೇಡುವಂತೆ ಕಾಣತೊಡಗಿತು.

"ನೀನೇ—ನೀನೇ ಮಾಡಿದುದು ಎಲ್ಲಾ! ಇಲ್ಲವಾದರೆ ಆ ಕುಸುಮಳ್ಳಿ ಯಿಂದ ನನ್ನನ್ನೇಕೆ ನಿನ್ನ ಬಳಿಗೆ ಕರೆದು ತಂದೆ?" ಎಂದು ಸರಳೆ ಹೇಳು ವಂತೆ ಮತ್ತೆ ಭಾಸವಾಯಿತು.

ರಮೇಶ ತತ್ತರಿಸುತ್ತಾ "ಸರಳಾ! ನಾನು ನಿನ್ನನ್ನು ವಿವಾಹವಾಗುವೆ ನೆಂದು ಕರೆದು ತಂದಿಲ್ಲ. ನಿನ್ನನ್ನು ನನ್ನ ತಂಗಿಯೆಂದು ಕರೆದುತಂದೆ-- ಸರಳಾ! ನೀನು ನನ್ನ ತಂಗಿ........" ಎಂದು ಉತ್ತರಕೊಡಲು ಸಿದ್ಧನಾದನು.

ಅಷ್ಟರೊಳಗೆ ಸುಮಿತ್ರೆ ವೇದನೆಯಿಂದ ನರಳುತ್ತಿರುವ ಶಬ್ದ ರಮೇಶ ನನ್ನು ಎಚ್ಚರಿಸಿತು. ಇದರಿಂದಲಂತೂ ರಮೇಶ ಶಾಂತಿಯನ್ನು ಕಾಣ ದಾದನು.

"ರಮೇಶ ರಾವ್!" ಹಿಂದಿನಿಂದ ಡಾಕ್ಟರರು ಕರೆದ ಸ್ವರ ಕೇಳಿಸಿತು. ರಮೇಶ ತತ್‌ಕ್ಷಣ ಹಿಂದಿರುಗಿ ನೋಡಿದನು.

"ಬಹಳ ನಿಶ್ಶಕ್ತಿಯಿಂದಾಗಿ ಸುಖ ಪ್ರಸವವಾಗದಂತಾಗಿದೆ. ತಾಯಿ, ಹೊಟ್ಟೆಯಲ್ಲಿರುವ ಮಗು, ಇಬ್ಬರಿಗೂ ಅಪಾಯ. ಪ್ರಯತ್ನಪಟ್ಟರೆ ಯಾರನ್ನಾದರೂ ಒಬ್ಬರನ್ನು ಉಳಿಸಬಹುದು, ಹೇಳಿರಿ—ಹೇಗೆ ಮಾಡ ಬೇಕು? ಎಂದು ಡಾಕ್ಟರರು ಕೇಳಿದರು.

"ಹೇಗೆ ಮಾಡಬೇಕು? ತಾಯಿಬೇಕೇ? ಮಗುಬೇಕೇ?........ಎಂತಹ ಪ್ರಶ್ನೆ?" ಕ್ಷಣ ಹೊತ್ತು ಅವಾಕ್ಕಾಗಿ ನಿಂತನು ರಮೇಶ. ಅವನ ಎದೆ ಯಲ್ಲಿ ಹೋರಾಟ ಪುನಃ ತೊಡಗಿತ್ತು!

ತಾಯಿಯನ್ನು ಬದುಕಿಸಿದರೆ ಮಗು ಇಲ್ಲವೆಂದು..........ಸತ್ತು ಹೋಯ್ತೆಂದು....ತಿಳಿದರೆ....ಮೊದಲೇ ಕ್ಷೀಣ ಶರೀರ! ಬದುಕುವಳೆ?........ ಕೊನೆಗೆ ತಾಯಿಯೂ ಇಲ್ಲ....ಮಗುವೂ ಇಲ್ಲ ಎನುವಂತಾಗುವುದಲ್ಲ ಎಂದು ಯೋಚಿಸುವ ವೇಳೆಯಲ್ಲಿಯೇ ಸರಳೆಯ ಪ್ರೇಮದಾಹ ಇಬ್ಬರೂ "ಇಲ್ಲದಿದ್ದರೆ ಸುಖವೇ ಆಯಿತಲ್ಲಾ.......ಸರಳೆಯೊಡನೆ ಬಾಳಲು ಅನುಕೂಲವೇ ಆಯಿತಲ್ಲಾ" ಎನ್ನುತ್ತಿತ್ತು.

"ಇನ್ನೂ ಕಣ್ಣಿಗೆ ಕಾಣದ ಮಗುವಿಗಾಗಿ ತಾಯನ್ನೇ ಕೊಲ್ಲುವುದು ಯಾವ ನ್ಯಾಯ? ತಾಯಿಯನ್ನು ಉಳಿಸಬೇಕು— ಈ ಮಗು ಹೋದರೆ ಹೋಗಲಿ! ಆಕೆ ಇನ್ನೂ ಹೆರಬಲ್ಲಳು!" ಎನ್ನುತ್ತಿತ್ತು ಮನಸ್ಸು! ಏನು ಮಾಡುವುದೆಂದರಿಯದೆ ರಮೇಶ ತಬ್ಬಿಬ್ಬಾದ.

"ಸುಮಿತ್ರೆ ಹೋದರೆ ಸರಳೆ ನಿನಗಾಗಿ ಕಾದಿದ್ದಾಳೆ— ಮಗು ಹೋದರೆ ಬೇರೆ ಹುಟ್ಟೀತೆಂದು ಯಾವ ನಿರ್ಧಾರ? ಹೇಳು—'ಮಗುವನ್ನು ಉಳಿಸಿರಿ' ಎಂದು"

ರಮೇಶ ಹಾಗೆಯೇ ಹೇಳಲು ಬಾಯಿತೆರೆದನು. ಆದರೆ ಅವನ ಬಾಯಿಯಿಂದ ಹೊರಬಂತು—"ತಾಯನ್ನು ಉಳಿಸಿರಿ."

ಸುಮಿತ್ರೆಯ ಪ್ರೇಮಕ್ಕೆ ತಕ್ಕ ಪುರಸ್ಕಾರ! ಹೌದು, ಆಕೆಯ ಬಾಳದೋಣಿಯನ್ನು ಕಡಲಿನ ಮಧ್ಯದಲ್ಲಿ ಕೃತಘ್ನತೆಯಿಂದ ಮುಳುಗಿಸಲು ಕೊನೆಗೂ ಬಿಡಲಿಲ್ಲ ರಮೇಶನ ಮನಸ್ಸು. ಸುಮಿತ್ರೆಯ ಪ್ರೇಮ ಅವನ ಮನಸ್ಸಿನ ಮೇಲೆ ಅಷ್ಟೊಂದು ಅಧಿಕಾರದ ಮುದ್ರೆಯನ್ನು ಒತ್ತಿತ್ತು!

ದುಃಖ ಭಾರದಿಂದ ತನ್ನ ಹೆಜ್ಜೆಗಳನ್ನು ಎತ್ತಿಡುತ್ತಾ ರಮೇಶ ತನ್ನ ಕೋಣೆಗೆ ನಡೆದು ಕುರ್ಚಿಯಲ್ಲಿ ಕುಳಿತುಕೊಂಡನು. ಎದುರಿನ ಮೇಜಿಗೆ ಎರಡೂ ಕೈಗಳನ್ನು ಊರಿ, ಅದರ ಮೇಲೆ ಅವನು ತನ್ನ ಮುಖವನ್ನಿರಿಸಿದ್ದನು. ಆಗ ಎದುರಿನ ಮೇಜಿನಲ್ಲಿ ಕವರೊಂದು ಕಂಡಿತು ಅವನಿಗೆ. ಅದರಲ್ಲಿ ಬರೆದಿತ್ತು—"ರಮೇಶಣ್ಣನಿಗೆ." ಎಂದು. ಪತ್ರ ಸರಳೆಯದೆಂಬುದರಲ್ಲಿ ಸಂಶಯ ಉಳಿಯಲಿಲ್ಲ. ಎತ್ತಿ ಅದನ್ನು ಓದತೊಡಗಿದನು. ಓದುತ್ತಾ ಅವನ ಮನಸ್ಸು ಪ್ರಸನ್ನವಾಗತೊಡಗಿತು.

ಆ ಪತ್ರದಲ್ಲಿ ಸರಳೆ, ತಾನು ಸುಧಾಕರನಿಂದ ಕೇಳಿದ ತನ್ನ ಜನ್ಮ ವೃತ್ತಾಂತವನ್ನು ಬರೆದಿದ್ದಳು. ಪತ್ರದ ಕೊನೆಯಲ್ಲಿ ಹೀಗಿತ್ತು—

"ರಮೇಶಣ್ಣಾ! ನಿನಗೊಂದು ಸಂತೋಷದ ಸುದ್ದಿ ತಿಳಿಸುವೆ. ಅದನ್ನು ನಿನ್ನೆದುರಿನಲ್ಲಿ ಹೇಳುವ ಭಾಗ್ಯ ನನಗಿಲ್ಲ. ಆದುದರಿಂದ ಇಲ್ಲಿ ಬರೆದಿರುವೆ.

ಇಂದು ಸುಧಾಕರ ನನ್ನೆದುರಿಗೆ ಎರಡು ಸಮಸ್ಯೆಗಳನ್ನಿರಿಸಿದನು— ಯಾರನ್ನಾದರೂ ಮದುವೆಯಾಗಿ ನಾನು ಯಾರೊಬ್ಬನ ಸಂಸಾರವನ್ನು ಸಾಗಿಸಲು ಇಚ್ಛಿಸುವೆನೋ ಅಥವಾ ಸಮಾಜದ ಸೇವೆ ಮಾಡಿ ಅನೇಕ ಬಡವರ ಸಂಸಾರ ಬೆಳಗುವಂತೆ ಮಾಡಲು ಇಚ್ಛಿಸುವೆಯೋ ಎಂದು. ಎರಡನೆಯ ಸಮಸ್ಯೆ ಕಷ್ಟ, ನಿಜವಣ್ಣಾ! ಆದರೆ ನಾನು ಯೋಚಿಸಿ ಅದನ್ನೇ ಆರಿಸಿಕೊಂಡೆನು. ನಾನು ಹೇಗೂ ನರ್ಸ್ ಆಗಿದ್ದೇನೆ. ಇನ್ನು ಹಳ್ಳಿ ಗಳಿಗೆ ನಡೆದು ಅಲ್ಲಿ ಬಡವರ ಕಾಯಿಲೆಗಳನ್ನು ಗುಣಪಡಿಸುವೆ, ಅವರ ಮಕ್ಕಳಿಗೆ ವಿದ್ಯಾಭ್ಯಾಸ ಕಲಿಸುವೆ. ಎಷ್ಟೋ ಆದರ್ಶಗಳು ನನ್ನೆದುರು ತೋರುತ್ತಿವೆ. ಅವುಗಳನ್ನು ಯಶಸ್ವಿಯಾಗಿ ನಾನು ಸಾಧಿಸಬೇಕಾದರೆ ನಿನ್ನ ಆಶೀರ್ವಾದ ಬೇಕು. ನಿನ್ನ ತಂಗಿಯನ್ನು ಆಶೀರ್ವದಿಸು ಅಣ್ಣಾ!

ಅಂತೂ ನೀನು ಸಾಕಿದ್ದಕ್ಕೆ ವಿದ್ಯೆ ಕಲಿಸದ್ದಕ್ಕೆ "ದೇಶ ಸೇವೆ" ಮಾಡಲು ಹೊರಟಿರುವೆ, ಇದೇ ನನ್ನ ಬಾಳುವೆಯ ಭವ್ಯತೆಗೆ ತಕ್ಕ ಪುರಸ್ಕಾರ.

"ನೀನೇನೂ ಹೆದರಬೇಡ. ಸುಧಾಕರ ಭಾವ ಈ ಪಥದಲ್ಲಿ ನನ್ನ ಕೈ ಹಿಡಿದು ನಡೆಸುತ್ತಾರೆ........

ಇತಿ ನಿನ್ನ ತಂಗಿ,

"ಸರಳಾ."

ರಮೇಶ ಪ್ರಸನ್ನಚಿತ್ತನಾಗಿ ಹೊರಗೆ ನೋಡಿದನು. ಹೊರಗೆ ಮಳೆ ಧಾರಾಕಾರವಾಗಿ ಸುರಿಯುತ್ತಿತ್ತು. ಮಳೆ ಹರಿದು, ಬಾನಿಗೆ ಮುಸುಕಿದ್ದ ಕಪ್ಪು ಮೋಡಗಳ ಮುಸುಕನ್ನು ಕಳೆಯುತ್ತಿತ್ತು. ಹಾಗೆಯೇ ಇಂದು ಸರಳೆಯ ಪತ್ರ ರಮೇಶನ ಮನಸ್ಸಿಗೆ ಕವಿದ ಚಿಂತೆಗಳನ್ನೆಲ್ಲಾ ಚದುರಿಸಿತು.

ನೆಟ್ಟ ದೃಷ್ಟಿಯಿಂದ ಶುಭ್ರವಾಗುತ್ತಿದ್ದ ದಿಗಂತವನ್ನು ದಿಟ್ಟಿಸುತ್ತಾ ಭಾವಪರವಶ ಹೃದಯನಾದ ರಮೇಶನ ಬಾಯಿಯಿಂದ ಮಾತುಗಳು ಹೊರಟುವು—"ಸರಳಾ ನನ್ನ ತಂಗಿ........ಹೌದು ನೀನೇ ನನ್ನ ತಂಗಿ. ದೇಶಸೇವೆ ಮಾಡ ಹೊರಟೆಯಾ? ಹಿರಿಯ ಗುರಿ ಸಾಧಿಸು. ನಿನ್ನ ಈ ಅಣ್ಣ ಏನೂ ಮಾಡಲಾರನು. ಆದುದರಿಂದ "ಇದು ಆತನದು" ಎಂದು ಒಮ್ಮೆ ನನ್ನ ಹೆಸರು ಹೇಳಿ ಬಡವನೊಬ್ಬನಿಗೆ ಸೇವೆ ಮಾಡು. ಅಷ್ಟೇ ನನಗೆ ಸಾಕು, ತಂಗೀ!........"

ಅಷ್ಟರಲ್ಲಿಯೇ ಡಾಕ್ಟರರೂ "ರಮೇಶ್, ನೀವು ಬಹಳ ಅದೃಷ್ಟವಂತರು. ತಾಯಿ ಮಗೂ ಎರಡೂ ಉಳಿದುವು" ಎಂದರು.

"ಹೌದು ಸಾರ್ ಅಂತೂ ಇವೆಲ್ಲಾ ದೇವರ ಆಟ. ಹೇಗೆ ತಾನೇ ನಂಬಲಿಕ್ಕೆ ಆಗುತ್ತದೆ? ದೇವರೂ ನನ್ನ ಮೇಲೆ ದಯೆಯಿಟ್ಟು ನನ್ನ ಕಾರ್ಯಕ್ಕೆ ತಕ್ಕ ಪುರಸ್ಕಾರವನ್ನೇ ಕೊಟ್ಟ ಅನ್ನಿ" ಎಂದು ಮಗುವನ್ನು ನೋಡಲು ಒಳಗೆ ಹೋದ.



